


ಗ್ರಂಥ ೬

# ವಿಜಯವಿಲಾಸ

(ಕಥೆ)

ಬೆಳ್ಳಾವೆ ನರಹರಿಶಾಸ್ತ್ರಿ

ಪ್ರಕಾಶಕರು

**ಬೆಳ್ಳಾವೆ ಪುಸ್ತಕಾಲಯ**

ಬೆಂಗಳೂರು ನಗರ

೧೯೩೪



**ಬೆಲೆ: ೮ ಆಣೆ.**

ಸುಧಾಕರ ಕರ್ಣಾಟಕ ಗ್ರಂಥಾವಳಿ

ಗ್ರಂಥ ೬

# ವಿಜಯವಿಲಾಸ

(ಕಥೆ)

ಬೆಳ್ಳಾವೆ ನರಹರಿಶಾಸ್ತ್ರಿ





೧೯೩೪

ಬೆಂಗಳೂರು ನಗರ

ಬೆಲೆ : ೮ ಆಣೆ]

ಇದು ಯವನ ಯಾಮಿನೀ ಕಥೆಗಳ ಜಾತಿಗೆ ಸೇರಿದ ಒಂದು ಕಲ್ಪಿತ ಕಥೆಯು. ಓದುಗರಿಗೆ ಮನೋರಂಜನೆಯಾಗುವಂತೆಯೂ, ಆ ಮೂಲಕವಾಗಿ ಲೌಕಿಕ ಧರ್ಮ ನೀತಿಗಳು ಮನವುಟ್ಟುವಂತೆಯೂ ವಿಷಯಗಳನ್ನು ಚಿತ್ರಿಸುವುದೇ ಈ ಗ್ರಂಥರಚನೆಯ ಮುಖ್ಯೋದ್ದೇಶವು. ಆದಕಾರಣ ಇದರಲ್ಲಿ ಅನೇಕ ಅದ್ಭುತ ಮಾಯಾಮಂತ್ರ ತಂತ್ರ ವಿಷಯಗಳನ್ನೂ ಅಮಾನುಷಕೃತ್ಯಗಳನ್ನೂ ಹೊಂದಿಸಿ ಕಥಾಸಂವಿಧಾನವನ್ನು ಕಲ್ಪಿಸಿದೆ. ಇದರಲ್ಲಿ ಗುಣವನ್ನು ಗ್ರಹಿಸಿ ಪ್ರೋತ್ಸಾಹಿಸುವ ಭಾಷಾಭಿಮಾನಿಗಳಿಗೆ ನನ್ನ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಸಮರ್ಪಿಸುವೆನು.

೧-೧೦-೧೯೩೪.
ಬೆಂಗಳೂರು ನಗರ.

ಬೆಳ್ಳಾವೆ ನರಹರಿಶಾಸ್ತ್ರಿ.

ಶ್ರೀಃ

# ವಿಜಯ ವಿಲಾಸ

## ಪ್ರಥಮ ತರಂಗ

ವಿಜಯದಶಮಿ ; ಲೋಕವೆಲ್ಲವೂ ಸಂತೋಷದಿಂದ ನಲಿಯುವ ಶುಭ ದಿವಸ. ಬೆಳಗಾಯಿತು ; ತಂಗಾಳಿಯು ಮನೋಹರವಾಗಿ ಬೀಸುತ್ತಿತ್ತು ; ದಿಕ್ಕುಗಳು ಕಳೆಯೇರಿದುವು ; ಪಕ್ಷಿಗಳು ಮಧುರವಾಗಿ ಗಾನಮಾಡ ಲಾರಂಭಿಸಿದುವು ; ಪೂರ್ವದಿಕ್ಕಾಮಿನಿಯು ಹಣೆಯಲ್ಲಿಟ್ಟ ಕುಂಕುಮದ ಬೊಟ್ಟಿನಂತೆ ತೇಜೋಮಯನಾದ ಮಾರ್ತಾಂಡನು ಉದಯಿಸಿ ಲೋಕಕ್ಕೆ ಆನಂದವನ್ನುಂಟುಮಾಡಿದನು. ಇಂತಹ ಶುಭ ಸಮಯದಲ್ಲಿ ರಾಣಿಯಾದ ಶೀಲವತೀದೇವಿಯು ಪ್ರಭಾಕರನಂತೆ ಪ್ರಭಾಮಯನಾದ ಪುತ್ರರತ್ನವನ್ನು ಪ್ರಸವಿಸಿದಳು. ಪುತ್ರೋದಯ ವಾರ್ತೆಯನ್ನು ಚೇಟಿಯ ಮುಖದಿಂದ ಕೇಳಿದ ಚಂದ್ರಸೇನರಾಯನ ಆನಂದ ಸಾಗರವು ಉಕ್ಕಿ ಮೇರೆ ಮೀರಿತು. ಶೀಲವತಿಯ ಅಭ್ಯುದಯವನ್ನು ನೋಡಿ ಸಹಿಸಲಾರದೆ ಇದ್ದ ಆಕೆಯ ಸವತಿಯರಾದ ಸೌದಾಮಿನಿ ಕಾದಂಬಿನಿಯರೆಂಬ ರಾಜನ ಕಿರಿಯ ಹೆಂಡಿ ರಿಬ್ಬರ ಅಸೂಯಾ ಕ್ರೋಧಗಳೂ ಮೇರೆ ಮೀರಿದುವು. ಶಿಶುವಿನ ಜಾತಕವನ್ನು ಪರಿಶೀಲಿಸಿದ ದೈವಜ್ಞರು, ಇವನು ಪ್ರಯತ್ನಿಸಿದ ಸಕಲ ಕಾರ್ಯಗಳಲ್ಲಿಯೂ ಅರ್ಜುನನಂತೆ ವಿಜಯಶಾಲಿಯಾಗುವನೆಂದು ಹೇಳಿದರು. ಇದನ್ನು ಕೇಳಿ ರಾಜರಾಜ್ಞಿಯರು, ಈ ಕುಮಾರನು ವಿಜಯದಶಮಿಯ ಶುಭದಿನದಲ್ಲಿ ಜನಿಸಿ ದವನಾಗಿ, ವಿಜಯನಾದ ಅರ್ಜುನನಂತೆ ವಿಜಯಶಾಲಿಯೂ ಆಗುವುದರಿಂದ '**ವಿಜಯಕುಮಾರ**'ನೆಂಬ ಹೆಸರು ಇವನಿಗೆ ಅನ್ವರ್ಥವಾಗುವುದೆಂದಾಲೋ ಚಿಸಿ, ಶಿಶುವಿಗೆ ವಿಜಯಕುಮಾರನೆಂದೇ ಹೆಸರಿಟ್ಟರು. ಅನಂತರ ಶುಕ್ಲಪಕ್ಷದ

ಸುಧಾಕರನಂತೆ ದಿನದಿನಕ್ಕೆ ಕಳೆಯೇರಿ ವರ್ಧಿಸುತ್ತಿದ್ದ ಮಗನನ್ನು ಅತ್ಯಂತ ಪ್ರೀತಿಯಿಂದ ಲಾಲಿಸಿ ಪಾಲಿಸುತ್ತ ಅವನ ಬಾಲಲೀಲೆಗಳಿಂದ ಆನಂದ ಪಡುತ್ತಿದ್ದರು.

ಕೆಲವು ಕಾಲದ ಮೇಲೆ ಈ ಕಿರಿಯ ಹೆಂಡಿರಿಬ್ಬರಿಗೂ ಒಬ್ಬೊಬ್ಬ ಕುಮಾರನು ಜನಿಸಿದನು. ಸೌದಾಮಿನಿಯ ಕುಮಾರನಿಗೆ **ಭಾನುತೇಜ**ನೆಂತಲೂ, ಕಾದಂಬಿನಿಯ ಮಗನಿಗೆ **ರಾಜಹಂಸ**ನೆಂತಲೂ ಹೆಸರಿಟ್ಟು ರಾಜ ರಾಜ್ಞಿಯರು ಇವರನ್ನೂ ಬಹಳ ಪ್ರೀತಿಯಿಂದ ಪೋಷಿಸುತ್ತಿದ್ದರು. ಹೀಗೆ ಮೂರು ಮಂದಿ ಪುತ್ರರೂ ತೇಜಸ್ವಿಗಳಾಗಿ ದಿನದಿನಕ್ಕೆ ಅಭಿವೃದ್ಧಿ ಹೊಂದುತ್ತಿರುವಲ್ಲಿ ರಾಜನು ಇವರಿಗೆ ಕಾಲೋಚಿತ ಶುಭ ಕರ್ಮಗಳನ್ನು ನಡೆಯಿಸಿ ಅಕ್ಷರಾಭ್ಯಾಸವನ್ನು ಮಾಡಿಸಿ, ಶಾಸ್ತ್ರ ವಿದ್ಯೆಯನ್ನೂ, ಶಸ್ತ್ರಾಸ್ತ್ರ ಕಲೆಗಳನ್ನೂ ಕಲಿಸಲು ಗುರುಗಳ ವಶಕ್ಕೆ ಒಪ್ಪಿಸಿದನು. ಈ ಮೂವರು ಸಹೋದರರಲ್ಲಿ ವಿಜಯಕುಮಾರನು ಅತ್ಯಂತ ಪ್ರತಿಭಾಶಾಲಿಯಾಗಿಯೂ ಇಂಗಿತಜ್ಞನಾಗಿಯೂ ಇದ್ದುದರಿಂದ ಗುರುಗಳು ಬೋಧಿಸಿದ ವಿದ್ಯೆಯನ್ನು ಚೆನ್ನಾಗಿ ಕಲಿತು ಗುರುಗಳಿಗೂ ತಂದೆಗೂ ಅತ್ಯಾನಂದವನ್ನುಂಟು ಮಾಡಿದನು. ಭಾನುತೇಜನೂ ರಾಜಹಂಸನೂ ವಿದ್ಯಾವಂತರಾದರೂ ವಿಜಯ ಕುಮಾರನಷ್ಟು ಶಾಂತಿಸ್ಥೈರ್ಯಗಳೂ, ವಿವೇಕವೂ ಅವರಲ್ಲಿರಲಿಲ್ಲ. ಅವನಂತೆ ಸುಂದರರಾಗಿಯೂ ಇರಲಿಲ್ಲ. ಕುಮಾರರು ವಿದ್ಯಾವಂತರೂ, ವಯೋವಂತರೂ, ಆದುದನ್ನು ನೋಡಿ ರಾಜನು ಇವರಿಗೆ ವಿವಾಹ ಮಾಡಬೇಕೆಂಬ ಉದ್ದೇಶದಿಂದ ತಕ್ಕ ಕನ್ಯೆಯರನ್ನು ಹುಡುಕಲು, ಮಂತ್ರಿಯಾದ **ಧುರಂಧರ**ನೊಡನೆ ಆಲೋಚಿಸುತ್ತಿದ್ದನು. ಆದರೆ ಬಾಲ್ಯದಿಂದಲೂ ಒಬ್ಬರೇ ಗುರುಗಳಲ್ಲಿ ರಾಜಪುತ್ರರ ಜೊತೆಯಲ್ಲಿಯೇ ಶಾಸ್ತ್ರ ವಿದ್ಯಾಭ್ಯಾಸ ಮಾಡುತ್ತಿದ್ದ ಮಂತ್ರಿ ಪುತ್ರಿಯಾದ **ವಿದ್ಯಾಧರಿ**ಯ ಚಿತ್ತವು, ಸೌಂದರ್ಯ ಪರಾಕ್ರಮ ಶೋಭಿತನಾದ ವಿಜಯನಲ್ಲಿ ಸಂಪೂರ್ಣವಾಗಿ ನೆಲೆಸಿದ್ದಿತು. ಹಾಗೆಯೇ ವಿದ್ಯಾಧರಿಯ ಸೌಂದರ್ಯ ಸೌಭಾಗ್ಯವು ವಿಜಯನ ಮನಸ್ಸನ್ನು

ಚೆನ್ನಾಗಿ ಅಪಹರಿಸಿ ಬಿಟ್ಟಿತ್ತು. ಹೀಗೆ ಇವರ ಪರಸ್ಪರಾನುರಾಗವು ದಿನದಿನಕ್ಕೆ ಹೆಚ್ಚುತ್ತಿರುವುದನ್ನು ಸಖೀಜನರ ಮುಖದಿಂದ ತಿಳಿದ ಶೀಲವತೀ ದೇವಿಯು ಪತಿಯಾದ ಚಂದ್ರಸೇನರಾಯನಿಗೆ ರಹಸ್ಯವಾಗಿ ತಿಳಿಸಲು ರಾಯನು ಬಹಳ ಸಂತೋಷಪಟ್ಟು, ಈ ದಾಂಪತ್ಯವು ಎಲ್ಲ ವಿಚಾರಗಳಲ್ಲಿಯೂ ಉತ್ತಮವಾಗಿರುವುದೆಂದು ಅಂಗೀಕರಿಸಿದನು. ಅನಂತರ ಮಂತ್ರಿಯಾದ ಧುರಂಧರನೊಡನೆ ಈ ವಿಚಾರವನ್ನು ತಿಳಿಸಲು, ಆತನೂ ಸಹ ರಾಜಸಂಬಂಧವೊದಗಿದುದಕ್ಕಾಗಿ ಸಂತೋಷಪಟ್ಟು ವಿದ್ಯಾಧರಿಯನ್ನು ವಿಜಯಕುಮಾರನಿಗೆ ಕೊಟ್ಟು ವಿವಾಹಮಾಡಲು ಒಪ್ಪಿದನು.

ಲಾವಣ್ಯದಲ್ಲಿ ಸುರಕಾಮಿನಿಯರನ್ನು ತಿರಸ್ಕರಿಸುತ್ತಿದ್ದ ವಿದ್ಯಾಧರಿಯ ರೂಪಕ್ಕೆ ಸೋತು ವಿಜಯನ ತಮ್ಮಂದಿರಾದ ಭಾನುತೇಜನೂ, ರಾಜಹಂಸನೂ ಸಹ ಅವಳ ಅನುರಾಗಕ್ಕೆ ಪಾತ್ರರಾಗಬೇಕೆಂದು ಆಲೋಚಿಸಿ ಒಬ್ಬನು ಮತ್ತೊಬ್ಬನಿಗೆ ತಿಳಿಯದಂತೆ ನಾನಾ ಪ್ರಯತ್ನಗಳನ್ನು ಮಾಡುತ್ತ ಸಮಯ ಸಿಕ್ಕಿದಾಗಲೆಲ್ಲವೂ ಆಕೆಯಲ್ಲಿ ಸರಸೋಕ್ತಿಗಳನ್ನಾಡಲು ಹೋಗಿ ಆಕೆಯಿಂದ ತಿರಸ್ಕೃತರಾಗಿ ಜೋಲುಮೋರೆ ಹಾಕಿಕೊಂಡು ಹಿಂದಿರುಗುತ್ತಿದ್ದರು. ವಿದ್ಯಾಧರಿಯ ವಿಶ್ವಾಸ ಪ್ರೀತಿಗಳಾದರೋ ವಿಜಯಕುಮಾರನಲ್ಲಿ ದಿನದಿನಕ್ಕೆ ಅತಿಶಯವಾಗುತ್ತ ಬಂದವು. ವಿಜಯನಿಗೆ ಕನಸು ಮನಸ್ಸುಗಳಲ್ಲಿ ಯಾವಾಗಲೂ ವಿದ್ಯಾಧರಿಯ ಬಿಂಬವೇ ಕಾಣಿಸುತ್ತಿತ್ತು. ಇಬ್ಬರೂ ತಮ್ಮ ವಿವಾಹ ಸಮಯವನ್ನು ಅತಿ ಕುತೂಹಲದಿಂದ ಎದುರುನೋಡುತ್ತ ದಿನಗಳನ್ನು ಯುಗಗಳಂತೆ ಕಳೆಯುತ್ತಿದ್ದರು.

ಹೀಗಿರುವಲ್ಲಿ ಚಂದ್ರಸೇನರಾಜನ ಆಸ್ಥಾನಕ್ಕೆ ಶಂಕರಾನಂದನೆಂಬ ಸಿದ್ಧನು ಬಂದು ರಾಜನಿಂದ ಸತ್ಕೃತನಾಗಿ ಆತನ ಜನ್ಮಾದಿಯಾಗಿ ಜೀವಮಾನದ ಫಲಗಳೆಲ್ಲವನ್ನೂ ವಿವರವಾಗಿ ತಿಳಿಸಿ ರಾಜನನ್ನು ಕುರಿತು "ಎಲೈ ರಾಜೇಂದ್ರಾ! ನೀನು ಹಿಮಾಚಲ ಪ್ರಾಂತ್ಯಕ್ಕೆ ಹೋಗಿ ಅಲ್ಲಿ ಶಂಕರನನ್ನು ಕುರಿತು ತಪಸ್ಸನ್ನಾಚರಿಸು. ಅದರಿಂದ ಸಂತುಷ್ಟನಾದ ಪರ

ಮೇಶ್ವರನು ನಿನಗೆ ನಿತ್ಯವಿಜಯಕಾರಣವಾದ ವರವೊಂದನ್ನು ಕರುಣಿಸು ವನು. ಅದರಿಂದ ಮುಂದೆ ನೀನು ಬಹಳ ಸುಖದಿಂದ ಬಾಳುವೆ.'' ಎಂದು ಹೇಳಿ ಆತನಿಗೆ ಶಿವಪಂಚಾಕ್ಷರೀ ಮಂತ್ರವನ್ನುಪದೇಶಿಸಿ, ರಾಜನಿಂದ ಪಾರಿ ತೋಷಿಕವನ್ನು ಪಡೆದು ಪ್ರಯಾಣ ಮಾಡಿದನು. ತನ್ನ ಅನುಭವಗಳೆಲ್ಲ ವನ್ನೂ ನಿಜವಾಗಿ ತಿಳಿಸಿದ ಸಿದ್ಧಪುರುಷನ ಪ್ರತಿಭಾಶಕ್ತಿಗಳಿಗಾಶ್ಚರ್ಯಾ ನಂದ ಪರವಶನಾದ ರಾಜನಿಗೆ ತಪಸ್ಸಿಗೆ ಹೊರಡುವ ಕುತೂಹಲವು ಪ್ರಬಲವಾಯಿತು. ಇದರಿಂದ ಮಗನ ವಿವಾಹ ವಿಚಾರವನ್ನು ತತ್ಕಾಲಕ್ಕೆ ನಿಲ್ಲಿಸಿ ಧುರಂಧರನ ವಶಕ್ಕೆ ರಾಜ್ಯವನ್ನೊಪ್ಪಿಸಿ ಪತ್ನೀಪುತ್ರರಿಗೆ ಕಾಲೋ ಚಿತವಾದ ಎಚ್ಚರಿಕೆಯನ್ನೂ ಬುದ್ಧಿವಾದಗಳನ್ನೂ ಹೇಳಿ ಚಂದ್ರಸೇನ ರಾಯನು ಹಿಮಾಚಲ ಪ್ರಾಂತ್ಯಕ್ಕೆ ಪ್ರಯಾಣ ಮಾಡಿದನು.

ರಾಜನು, ಮಂಜುಮುಚ್ಚಿ ಸ್ಫಟಿಕರಾಶಿಗಳಂತೆ ಕಂಗೊಳಿಸುತ್ತ ಮುಗಿಲನ್ನು ಮುಟ್ಟುವಂತಿರುವ ಕೋಡುಗಲ್ಲುಗಳಿಂದ ಕೂಡಿದ್ದ, ನಿರ್ಜನ ವಾದ ಆ ಹಿಮಾಚಲದ ಬಳಿಯನ್ನು ಸೇರಿ, ಹಗಲಿರುಳೂ ಅವಿಚ್ಛಿನ್ನ ವಾಗಿ ಸುರಿಯುತ್ತಿರುವ ಮಂಜಿಗೂ, ಚಳಿಗಾಳಿಗಳಿಗೂ ಸ್ವಲ್ಪವೂ ಹಿಂದೆಗೆ ಯದೆ ಬದರಿಕಾಶ್ರಮದಲ್ಲಿ ಪರಮಭಕ್ತಿಯಿಂದ ಮಹಾದೇವನನ್ನು ಕುರಿತು ಮಹಾ ತಪಸ್ಸನ್ನಾಚರಿಸುತ್ತಿದ್ದನು. ಅದೇ ಕಾಲದಲ್ಲಿಯೇ ರತ್ನದ್ವೀಪಾಧಿ ಪತಿಯಾದ **ಅಗ್ನಿಶಿಖ**ನೆಂಬ ರಾಕ್ಷಸೇಂದ್ರನೂ ಸಹ ತಾನು ಅಜೇಯ ನಾಗಿರುವಂತೆ ಶಂಕರನಿಂದ ವರವನ್ನು ಪಡೆಯಬೇಕೆಂದು ಘೋರ ತಪಸ್ಸನ್ನಾಚರಿಸುವುದಕ್ಕಾಗಿ ಚಂದ್ರಸೇನರಾಜನು ಕುಳಿತಿದ್ದ ಕಡೆಯಲ್ಲಿಯೇ ಬಂದು ಕುಳಿತನು. ಹೀಗೆ ಮಾನವೇಂದ್ರ ದಾನವೇಂದ್ರರಿಬ್ಬರೂ ಘೋರ ತಪಸ್ಸಿನಲ್ಲಿ ಕುಳಿತಿರಲು ಅನೇಕ ದಿನಗಳು ಕಳೆದುಹೋದುವು. ಕಡೆಗೆ ಪರಮೇಶ್ವರನು ಇವರ ಭಕ್ತಿಗೆ ಮೆಚ್ಚಿ ಇಬ್ಬರಿಗೂ ಏಕಕಾಲದಲ್ಲಿ ಪ್ರಸನ್ನ ನಾಗಿ ಪ್ರತ್ಯಕ್ಷನಾದನು. ಸ್ಫಟಿಕ ವಿಗ್ರಹದಂತಿರುವ ತನ್ನ ಶರೀರದಲ್ಲಿ ಬಳ್ಳಿ ಮಿಂಚುಗಳಂತೆ ಕಂಗೊಳಿಸುವ ವಿಭೂತಿ ಪುಂಡ್ರಗಳಿಂದಲೂ, ಸರ್ಪಾ

ಭರಣಗಳ ರತ್ನಕಾಂತಿಗಳಿಂದಲೂ, ಶಿರದಲ್ಲಿ ಧರಿಸಿರುವ ಬಾಲಚಂದ್ರನ ಕಳೆಗಳಿಂದ ಥಳಥಳಿಸುವ ದೇವಗಂಗೆಯಿಂದೊಪ್ಪುವ ಜಟಾಮುಕುಟ ದಿಂದಲೂ, ಮನೋಹರ ಸ್ಫಟಿಕಮಾಲಾ ಕಲಾಪಗಳಿಂದಲೂ, ತೇಜೋ ಮಯನಾಗಿ, ಶೂಲ ಖಡ್ಗ ಡಮರುಗ ಪರಶು ಮೃಗಾಲಂಕೃತ ಹಸ್ತನಾಗಿ ಪ್ರಕಾಶಿಸುತ್ತ, ಬೆಳ್ದಿಂಗಳನ್ನು ಧಿಕ್ಕರಿಸುವ ಸುಂದರ ಮಂದಹಾಸದಿಂದ ಬಂದು ನಿಂತು ಮಹಾದೇವನು ಭಕ್ತರಿಬ್ಬರನ್ನೂ ಆದರದಿಂದ ಮೈದಡವಿ ಎಚ್ಚರಿಸಿದನು. ಆಗ ಆ ತಪಸ್ವಿಗಳಿಬ್ಬರೂ ಆಶ್ಚರ್ಯದಿಂದೆದ್ದು, ಶಂಕರನ ದಿವ್ಯಾಕಾರವನ್ನು ನೋಡಿ, ಪರಮಾನಂದ ಪರವಶರಾಗಿ, ಸಾಷ್ಟಾಂಗ ನಮಸ್ಕಾರಮಾಡಿ ಕೈಮುಗಿದು ವಿಧವಿಧವಾಗಿ ಸಾಂಬಶಿವನನ್ನು ಸ್ತುತಿಸಿ ಆನಂದಾಶ್ರುಗಳಿಂದ ನೆನೆದರು. ಆಗ ಭಕ್ತವತ್ಸಲನಾದ ಶಂಕರನು, ರತ್ನಖಚಿತವಾದ ಸುವರ್ಣಬಾಣವೊಂದನ್ನು ಕೈಯಲ್ಲಿ ಹಿಡಿದು ಭಕ್ತರಿಬ್ಬ ರನ್ನೂ ನೋಡಿ, "ಎಲೈ ಭಕ್ತಶಿರೋಮಣಿಗಳಾದ ದನುಜೇಂದ್ರ ಮನುಜೇಂದ್ರರೇ! ನಾನು ನಿಮ್ಮ ಭಕ್ತಿಗೆ ಮೆಚ್ಚಿದೆನು. ಇದೋ ಈ ರತ್ನ ಖಚಿತವಾದ ಸುವರ್ಣಬಾಣವು ಯಾರಲ್ಲಿರುವುದೋ ಆತನು ನಿತ್ಯವಿಜಯ ಶಾಲಿಯಾಗಿ ಇಷ್ಟಾರ್ಥಗಳನ್ನು ಪಡೆದು ಸುಖದಿಂದಿರುವನು. ಆದುದರಿಂದ ಈಗ ನೀವಿಬ್ಬರೂ ನಿಮ್ಮ ನಿಮ್ಮ ಶಕ್ತಿಗಳನ್ನು ತೋರಿಸಿದರೆ ನಿಮ್ಮಲ್ಲಿ ಹೆಚ್ಚು ಬಲಶಾಲಿಯಾದವನಿಗೆ ಈ ಶರವನ್ನು ಕೊಡುವೆನು" ಎಂದನು. ಇದನ್ನು ಕೇಳಿದ ಕೂಡಲೇ ಅಹಂಕಾರ ಮತ್ತನೂ ಘೋರಾಕಾರನೂ ಆದ ಅಗ್ನಿಶಿಖನಿಗೆ ಬಹಳ ಸಂತೋಷವಾಯಿತು. ಆದಕಾರಣ ಅವನು ಶಂಕರ ನನ್ನು ನೋಡಿ "ಎಲೈ ಸ್ವಾಮಿಯೇ, ಈ ನಿನ್ನ ನಿಬಂಧನೆಯಿಂದಲೇ ನಿನಗೆ ನನ್ನಲ್ಲಿ ಅತಿಶಯವಾದ ಪ್ರೀತಿಯಿರುವುದೆಂದು ವ್ಯಕ್ತವಾಯಿತು. ಕುಲಗಿರಿ ಗಳನ್ನು ಚೆಂಡಾಡಬಲ್ಲ ಬಾಹುಬಲದಿಂದ ಪ್ರಚಂಡ ಪರಾಕ್ರಮಿಯೆನಿಸಿರುವ ಲೋಕವಿಖ್ಯಾತನಾದ ಈ ಅಗ್ನಿಶಿಖನ ಮುಂದೆ ಈ ಬಡಮಾನವನು ಧೈರ್ಯ ದಿಂದ ನಿಂತು ಹೋರಾಡಬಲ್ಲನೆ! ಈ ತೃಣಪ್ರಾಯನಾದ ನರನೆಷ್ಟರವನು!

ಈ ಅಲ್ಪನ ಬಲವೆಷ್ಟರದು! ಅಗ್ನಿಯ ಮುಂದೆ ತೃಣದ ಪೌರುಷವೇ? ಇದೋ ಈಗಲೇ ನನ್ನ ಪೌರುಷಾಗ್ನಿ ಜ್ವಾಲೆಗಳಿಂದ ಈ ಬಡಮಾನವನನ್ನು ಸುಟ್ಟು ವಿಜಯಶಾಲಿಯಾಗಿ ನಿನಗೆ ನೇತ್ರೋತ್ಸವವನ್ನುಂಟುಮಾಡಿ ನಿನ್ನಿಂದ ರತ್ನಶರವನ್ನು ಪಡೆಯುವೆನು.'' ಎಂದು ಅಪರಿಮಿತವಾಗಿ ಆತ್ಮ ಪ್ರಶಂಸೆ ಮಾಡಿಕೊಳ್ಳುತ್ತಾ, ಹೂಂಕರಿಸಿ ಬಳಿಯಲ್ಲಿ ನಿಂತಿದ್ದ ಚಂದ್ರಸೇನ ರಾಜನ ಕೈಯನ್ನು ಹಿಡಿದು ಮಲ್ಲಯುದ್ಧಕ್ಕೆ ಸಿದ್ಧನಾಗೆಂದು ಎಳೆದು ಮೂದಲಿಸಿದನು. ರಾಜನು ಮಹಾ ಪ್ರತಾಪಶಾಲಿಯಾದರೂ ತ್ರಿಪುರಾಂತ ಕನ ಮುಂದೆ ಅಲ್ಪನಾದ ತನ್ನ ಪೌರುಷವೆಷ್ಟರದೆಂಬ ದೈನ್ಯದಿಂದಲೂ, ಯುದ್ಧದಲ್ಲಿ ಜಯಪರಾಜಯಗಳು ದೈವಾಧೀನವೆಂದು ತಿಳಿದವನಾದುದ ರಿಂದಲೂ, ಸ್ವಲ್ಪವೂ ಅಹಂಕಾರಪಡದೆ ಮಹಾದೇವನ ಪಾದಾರವಿಂದ ಗಳಿಗೆ ನಮಸ್ಕರಿಸಿ '' ಪರಮೇಶ್ವರಾ! ಭಕ್ತವತ್ಸಲನಾದ ನೀನು ನಿನ್ನ ಭಕ್ತ ನಲ್ಲಿ ಕಟಾಕ್ಷವನ್ನಿಟ್ಟು ಪಾಲಿಸು '' ಎಂದು ಪ್ರಾರ್ಥಿಸಿ ಅಗ್ನಿಶಿಖನೊಡನೆ ಮಲ್ಲಯುದ್ಧವನ್ನಾರಂಭಿಸಿದನು. ಮಹಾ ಪರಾಕ್ರಮಿಗಳಾದ ಆ ವೀರರ ಪಾದಘಾತಗಳಿಂದ ಭೂಮಿಯು ಅದಿರುವಂತಾಯ್ತು. ಭುಜಾಸ್ಫಾಲನ ಶಬ್ದದಿಂದ ದಿಕ್ತಟವು ಒಡೆಯುವಂತಾಯಿತು. ವಿಧವಿಧ ಬಂಧಗಳಿಂದ ಮಹಾ ಚಾತುರ್ಯವನ್ನು ತೋರಿಸಿ ಹೋರಾಡಿದ ಅವರಿಬ್ಬರ ಪರಾಕ್ರಮ ಕೌಶಲಗಳಿಗೆ ಪರಮೇಶ್ವರನು ಮೆಚ್ಚಿ ಸಂತೋಷಪಡುತ್ತಿದ್ದನು. ರಾಕ್ಷಸನು ರಾಜನನ್ನು ಹೆಮ್ಮೆಯಿಂದ ಅವಹೇಳನಮಾಡುತ್ತಾ, ಪೌರುಷೋಕ್ತಿಗಳನ್ನಾ ಡುತ್ತಾ, ಆತನ ಬೆನ್ನನ್ನು ಕಚ್ಚಿ ಮೇಲಕ್ಕೆ ಎತ್ತಿ ನೆಲಕ್ಕೆ ಅಪ್ಪಳಿಸಬೇಕೆಂದು ಹೋಗಲು ರಾಜನು ಈ ದಡಿಗನನ್ನು ಯುಕ್ತಿಯಿಂದ ಒಂದೇಸಲಕ್ಕೆ ಫಕ್ಕನೆ ಮೇಲಕ್ಕೆ ಚಿಮ್ಮಿ ಎರಡು ಕಾಲುಗಳನ್ನೂ ಹಿಡಿದು ಗಿರಿಗಿರನೆ ತಿರುಗಿಸಿ ಬೀಸಿ ನೆಲಕ್ಕೆ ಬಡಿದೆಸೆದನು. ಆಗ ಅಗ್ನಿಶಿಖನು ರಕ್ತಮುಖ ನಾಗಿ, ಬಳಲಿ ಬೆಂಡಾಗಿ ಮೂರ್ಛೆ ಬಿದ್ದನು. ಶಂಕರನು ಚಂದ್ರಸೇನರಾಜನ ಪರಾಕ್ರಮಕ್ಕೆ ಆಶ್ಚರ್ಯಪಟ್ಟು ಆನಂದದಿಂದ ರತ್ನಬಾಣವನ್ನಾತನಿಗೆ

ಕೊಟ್ಟು ವಿಜಯಶಾಲಿಯಾಗೆಂದಾಶೀರ್ವದಿಸಿ, ಅಂತರ್ಧಾನನಾದನು. ಚಂದ್ರಸೇನರಾಯನು ಪರಮಾನಂದದಿಂದ ಬಾಣವನ್ನು ತೆಗೆದುಕೊಂಡು ಭವಿಷ್ಯವನ್ನು ಹೇಳಿದ ಸಿದ್ಧಪುರುಷನನ್ನು ಮನಸ್ಸಿನಲ್ಲಿ ಕೊಂಡಾಡುತ್ತ ತನ್ನ ರಾಜಧಾನಿಯಾದ ವೇದವತೀ ನಗರವನ್ನು ಕುರಿತು ಪ್ರಯಾಣಮಾಡಿದನು. ಬಳಲಿ, ಶವದಂತೆ ಮೂರ್ಛೆ ಬಿದ್ದಿದ್ದ ಅಗ್ನಿಶಿಖನಿಗೆ ಇಷ್ಟು ಹೊತ್ತಿಗೆ ಮೂರ್ಛೆಯಿಂದೆಚ್ಚರವಾಯಿತು. ಆ ಕೂಡಲೇ ಎದ್ದು, ಮತ್ತೆ ಚಂದ್ರಸೇನನೊಡನೆ ಯುದ್ಧಮಾಡಿ ಅವನನ್ನು ಸದೆಬಡಿದು ರತ್ನಶರವನ್ನು ಶಿವನಿಂದ ತಾನೇ ಪಡೆದುಕೊಳ್ಳಬೇಕೆಂಬ ಕ್ರೋಧಾತುರಗಳಿಂದ, ಅವನು ಮುಂದೆ ಬಂದು ಸುತ್ತಲೂ ನೋಡುವಲ್ಲಿ ಚಂದ್ರಸೇನನೂ ಇರಲಿಲ್ಲ, ಚಂದ್ರಶೇಖರನೂ ಇರಲಿಲ್ಲ. ಸ್ವಲ್ಪ ಹೊತ್ತು ಸ್ತಬ್ಧನಾಗಿ ನಿಂತಿದ್ದು, ಕಡೆಗೆ ಚಂದ್ರಸೇನನಿಗೆ ಶರವು ಲಭಿಸಿತೆಂದು ತಿಳಿದು ಅಗ್ನಿಶಿಖನು ಭಗ್ನಮನೋರಥನಾಗಿ ಕ್ರೋಧಾಗ್ನಿಯಿಂದ ಬೇಯುತ್ತ ಚಂದ್ರಸೇನನಿಗೆ ತಕ್ಕುದನ್ನು ಮಾಡಿ ಅವನಿಂದ ಹೇಗಾದರೂ ಆ ರತ್ನಬಾಣವನ್ನು ಅಪಹರಿಸದೆ ಬಿಡೆನೆಂದು ಶಪಥಮಾಡಿಕೊಂಡು ಹೊರಟನು. ಅನಂತರ ಕಾಮರೂಪಿಯಾದ ಆ ರಾಕ್ಷಸನು ತಾನು ಒಂದು ಹದ್ದಿನರೂಪವನ್ನು ಧರಿಸಿ ಅಂತರಿಕ್ಷಕ್ಕೆ ಹಾರಿಹೋಗಿ ಅಲ್ಲಿಂದ ನೋಡಿ ರಾಜನಿರುವ ಸ್ಥಳವನ್ನು ಕಂಡುಹಿಡಿದು ಉಪಾಯದಿಂದ ಶರವನ್ನು ಅಪಹರಿಸಬೇಕೆಂದು ಸಂಕಲ್ಪಿಸಿದನು. ಆದರೆ ಇಷ್ಟುಹೊತ್ತಿಗೆ ಸಂಧ್ಯಾಕಾಲವಾಗುತ್ತ ಬಂತು. ಸೂರ್ಯನು ಅರುಣ ಕಿರಣಗಳಿಂದ ಕೂಡಿ ಅಸ್ತಾಚಲದಿಂದ ಅಪರಾಂಬುಧಿಗೆ ಇಳಿಯುತ್ತಿದ್ದನು. ರಾಕ್ಷಸನೂ ಸಹ ಕಾಂತಿಗುಂದಿ, ಮಲ್ಲಯುದ್ಧದಿಂದ ಮೈನೊಂದು ಬಳಲಿ ಬೆಂಡಾಗಿ ವಿಶ್ರಾಂತಿಯನ್ನು ಬಯಸುತ್ತಿದ್ದನು. ಇದರಿಂದ ಆ ರಾತ್ರಿಯನ್ನು ಕಳೆದು ಮಾರನೆಯ ದಿನ ತನ್ನ ಮಾಯಾ ಗೃಧ್ರವೇಷದಿಂದ ಶರಾನ್ವೇಷಣಕ್ಕೆ ಹೊರಡಬೇಕೆಂದು ನಿಶ್ಚಯಿಸಿ ಅಗ್ನಿಶಿಖನು ತನ್ನ ರಾಜಧಾನಿಯಾದ ರತ್ನದ್ವೀಪಕ್ಕೆ ಹೊರಟುಹೋದನು.

---

# ದ್ವಿತೀಯ ತರಂಗ

ಇತ್ತಲಾ ವೇದವತೀ ನಗರದಲ್ಲಿ ರಾಜನು ತಪಸ್ಸಿಗೆ ಹೋದುದು ಮೊದಲಾಗಿ ಪರಮ ಪತಿವ್ರತೆಯಾದ ಶೀಲವತಿಯು ತನ್ನ ಪತಿಗೆ ಯಾವಾಗಲೂ ಶುಭವನ್ನೇ ಬಯಸುತ್ತ, ಆತನು ಯತ್ನಿಸಿದ್ದ ಕಾರ್ಯದಲ್ಲಿ ಜಯಶಾಲಿಯಾಗಿ ಬರುವಂತೆ ಅನುಗ್ರಹಿಸಲು ತ್ರಿಕಾಲದಲ್ಲಿಯೂ ಸರ್ವಮಂಗಳೆಯನ್ನಾರಾಧಿಸುತ್ತ, ಪತಿಯ ಆಗಮವನ್ನು ಅತಿ ಕುತೂಹಲದಿಂದ ನಿರೀಕ್ಷಿಸಿಕೊಂಡು ನಿಯಮನಿರತೆಯಾಗಿ ಕಾಲವನ್ನು ಕಳೆಯುತ್ತಿದ್ದಳು.

ವಿಜಯ ವಿದ್ಯಾಧರಿಯರು, ತಮ್ಮ ವಿವಾಹ ಮಂಗಳವು ನೆರವೇರಲು ವಿಳಂಬವಾದುದಕ್ಕಾಗಿ ವಿರಹವ್ಯಥೆಯಿಂದ ದಿನದಿನಕ್ಕೆ ಕೃಶರಾಗುತ್ತ, ಚಂದ್ರಸೇನರಾಯನು ವಿಜಯಶಾಲಿಯಾಗಿ ಬರುವುದನ್ನೇ ಅತಿ ಕುತೂಹಲದಿಂದ ಎದುರುನೋಡುತ್ತ, ಕನಸಿನಲ್ಲಿಯೂ ಸಹ ವಿವಾಹವಿಚಾರವಲ್ಲದೆ ಬೇರೊಂದನ್ನು ನೆನೆಯದೆ ಬಹು ಕಷ್ಟದಿಂದ ದಿನಗಳನ್ನು ನೂಕುತ್ತಿದ್ದರು.

ವಿದ್ಯಾಧರಿಯನ್ನು ಪಾಣಿಗ್ರಹಣಮಾಡಿಕೊಳ್ಳಬೇಕೆಂದು ಮೋಹಾತುರರಾಗಿದ್ದ ಭಾನುತೇಜನೂ ರಾಜಹಂಸನೂ ಸಹ ಹೇಗಾದರೂ ವಿಜಯ ವಿದ್ಯಾಧರಿಯರ ಪರಸ್ಪರಾನುರಾಗವನ್ನು ಒಡೆದು ಹಾಕಿ ತಾವು ಅವಳ ಪ್ರೀತಿಯನ್ನು ಸಂಪಾದಿಸಬೇಕೆಂದು ಒಬ್ಬನು ಮತ್ತೊಬ್ಬನಿಗೆ ಗೋಚರವಿಲ್ಲದೆ ನಾನಾ ಪ್ರಯತ್ನಗಳನ್ನು ಮಾಡಿ ವಿಫಲರಾದರು. ಇದರಿಂದ ವಿಜಯನಲ್ಲಿ ಅವರಿಗೆ ಅಸೂಯೆಯು ದಿನದಿನಕ್ಕೆ ಹೆಚ್ಚುತ್ತಲೇ ಬಂತು. ಒಂದಾನೊಂದು ದಿನ ಇವರಿವರ ಮನೋಭಾವಗಳು ಪರಸ್ಪರ ವ್ಯಕ್ತವಾದುವು. ಆದರೆ ಇವರಿಗೆ ವಿದ್ಯಾಧರಿಯ ಮೇಲಣ ಮೋಹವೂ ವಿಜಯನ ಮೇಲಣ ಅಸೂಯೆಯೂ ಸಮಾನವಾಗಿದ್ದುವು. ಕಡೆಗೆ ತಮ್ಮಿಬ್ಬರಲ್ಲಿ ಯಾರಾದರೂ ಒಬ್ಬನು ವಿದ್ಯಾಧರಿಯನ್ನು ವಿವಾಹಮಾಡಿಕೊಳ್ಳಬೇಕಲ್ಲದೆ ಅವಳು ವಿಜಯನ

ಕೈಸೇರುವಂತೆ ಎಂದಿಗೂ ಅವಕಾಶಕೊಡಕೂಡದೆಂದು ತಮ್ಮ ತಮ್ಮಲ್ಲಿ ನಿಶ್ಚಯಿಸಿಕೊಂಡರು. ಆದರೂ ಹೇಗಾದರೂ ಮಾಡಿ ತಾನೇ ಅವಳನ್ನು ವಿವಾಹ ಮಾಡಿಕೊಳ್ಳಬೇಕೆಂದು ಒಬ್ಬನು ಮತ್ತೊಬ್ಬನಿಗೆ ಮೋಸ ಮಾಡಲು ಅಂತರ್ಯದಲ್ಲಿ ಆಲೋಚಿಸಿಕೊಂಡನು. ಅನಂತರ ಇವರಿಬ್ಬರೂ ಅವಳನ್ನು ಉಪಾಯದಿಂದ ಸಮ್ಮತಿಪಡಿಸಬೇಕೆಂದು ಆಕೆಯು ಉದ್ಯಾನ ದಲ್ಲಿ ಶಿಲಾತಲ್ಪದ ಮೇಲೆ ವಿರಹವ್ಯಥೆಯಿಂದ ಕುಳಿತಿರುವ ಸಮಯದಲ್ಲಿ ಹೋಗಿ, ಆಕೆಯಲ್ಲಿ ಸರಸೋಕ್ತಿಗಳನ್ನಾರಂಭಿಸಿ ತಮ್ಮ ಭಾವನೆಯನ್ನು ಸೂಚಿಸಿ ಪ್ರಾರ್ಥಿಸಿಕೊಂಡರು. ವಿದ್ಯಾಧರಿಯಾದರೋ ನಿಜಪ್ರೇಮ ಯುಕ್ತಳೂ, ನಿಶ್ಚಲಮನಸ್ಕಳೂ ಆದುದರಿಂದ ಇವರ ಪ್ರಾರ್ಥನೆಯನ್ನು ತಿರಸ್ಕರಿಸಿ, ರೂಪದಲ್ಲಿ ಮನ್ಮಥನನ್ನೂ, ತೇಜಸ್ಸಿನಲ್ಲಿ ಚಂದ್ರನನ್ನೂ, ಪರಾ ಕ್ರಮದಲ್ಲಿ ಪಾರ್ಥನನ್ನೂ ಹೋಲುತ್ತಿರುವ ವಿಜಯಕುಮಾರನನ್ನೇ ತನ್ನ ಪತಿಯೆಂದು ಮನಸ್ಸಿನಲ್ಲಿ ನಿಶ್ಚಯಿಸಿರುವುದಾಗಿಯೂ, ಉಳಿದ ಪುರುಷರು ತನಗೆ ಸಹೋದರ ಸಮಾನರೆಂತಲೂ ಹೇಳಿ, ಇನ್ನು ಮುಂದೆ ತನ್ನಲ್ಲಿ ಈ ವಿಚಾರವನ್ನು ಹೇಳಬಾರದೆಂದು ರಾಜಕುಮಾರರಿಬ್ಬರಿಗೂ ಕೈಮುಗಿದು ಪ್ರಾರ್ಥಿಸಿಕೊಂಡಳು. ಆದರೂ ಬಿಡದೆ ಈ ಮೋಹಾಂಧರು ಆಕೆಯನ್ನು ಅತಿಯಾಗಿ ಪೀಡಿಸಲಾರಂಭಿಸಿದರು. ಆಕೆಯ ನಿಶ್ಚಲಮನಸ್ಸಿನ ಮುಂದೆ ಇವರ ಹರಟೆಗಳೆಲ್ಲವೂ ವ್ಯರ್ಥವಾದವು. ಕಡೆಗೆ ತಮ್ಮಿಂದ ಆಕೆಯ ಮನವ ನ್ನೊಪ್ಪಿಸಲು ಅಸಾಧ್ಯವೆಂದು ತಿಳಿದು ತಮ್ಮ ತಾಯಿಯರಾದ ಸೌದಾಮಿನಿ ಕಾದಂಬಿನಿಯರ ಮೂಲಕ ಅವಳ ಮನಸ್ಸನ್ನು ತಮ್ಮ ಕಡೆಗೆ ತಿರುಗಿಸಿ ಕೊಳ್ಳಬೇಕೆಂದಾಲೋಚಿಸಿ ಅರಮನೆಗೆ ಬಂದು ತಾಯಿಯರೊಡನೆ ಎಲ್ಲ ವೃತ್ತಾಂತವನ್ನೂ ಹೇಳಿಕೊಂಡು ಹೇಗಾದರೂ ಆ ವಿದ್ಯಾಧರಿಯನ್ನು ತಮ್ಮಿಬ್ಬರಲ್ಲಿ ಒಬ್ಬರಿಗೆ ತಂದು ವಿವಾಹ ಮಾಡಲೇ ಬೇಕೆಂತಲೂ, ಇಲ್ಲವಾದರೆ ತಾವು ಪ್ರಾಣತ್ಯಾಗವನ್ನೇ ಮಾಡಿಕೊಳ್ಳುವೆವೆಂತಲೂ ಹೇಳಿಕೊಂಡರು. ಮೊದಲಿಂದಲೂ ಸವತಿಯಾದ ಶೀಲವತಿಯಮೇಲೆಯೂ ಅವಳ ಮಗನಾದ

ವಿಜಯನಮೇಲೆಯೂ ಅಸೂಯೆಯಿಂದ ಬೆಂಕಿಯನ್ನೇ ಕಾರುತ್ತಿದ್ದ ಸೌದಾಮಿನಿ ಕಾದಂಬಿನಿಯರ ಕ್ರೋಧಾಗ್ನಿಗೆ ಇದು ಮತ್ತಷ್ಟು ತೈಲವನ್ನು ಸುರಿದಂತಾಯಿತು. ಆಗ ಅವರಿಬ್ಬರೂ ಒಂದಾಗಿ, ಹೇಗಾದರೂ ಆ ಶೀಲವತಿ ಯನ್ನೂ ಅವಳ ಮಗನನ್ನೂ ರಾಜನ ಆಗ್ರಹಕ್ಕೆ ಪಾತ್ರರನ್ನಾಗಿ ಮಾಡಿದರೆ ತಮ್ಮ ಮಾರ್ಗವು ನಿಷ್ಕಂಟಕವಾಗುವುದೆಂದು ಆಲೋಚಿಸಿ, ತಾವು ಆ ವಿದ್ಯಾಧರಿಯನ್ನು ವಿಜಯನಿಗೆ ತಪ್ಪಿಸಿ ಭಾನುತೇಜನಿಗಾಗಲಿ, ರಾಜಹಂಸನಿ ಗಾಗಲಿ ತಂದು ವಿವಾಹ ಮಾಡಿಸುತ್ತೇವೆಂದು ಮಕ್ಕಳಿಬ್ಬರಿಗೂ ಭರವಸೆ ಹೇಳಿ ರಾಜನ ಆಗಮನವನ್ನೇ ನಿರೀಕ್ಷಿಸಿಕೊಂಡಿದ್ದರು.

ಹೀಗಿರಲು ಶಂಕರನಿಂದ ರತ್ನಬಾಣವನ್ನು ಪಡೆದು ಲಬ್ಧಮನೋರಥ ನಾಗಿ ರಾಜನು ರಾಜಧಾನಿಗೆ ಹಿಂದಿರುಗಿ ಬಂದನು. ಇಷ್ಟಾರ್ಥವನ್ನು ಪಡೆದು ಕುತೂಹಲದಿಂದ ಬಂದ ರಾಜನನ್ನು ನೋಡಿ ಪತ್ನಿಯರೂ, ಪುತ್ರರೂ ಮಂತ್ರಿಯಾದ ಧುರಂಧರನೂ ಸಹ ಪರಮಾನಂದ ಪರವಶರಾದರು. ಪ್ರಜೆ ಗಳೆಲ್ಲರೂ ಆನಂದಾಂಬುಧಿಯಲ್ಲಿ ಓಲಾಡುತ್ತ ರಾಜನನ್ನು ಕೊಂಡಾಡಿದರು. ರಾಜನೂ ಸಹ ತನಗೆ ಒದಗಿದ ದೈವಾನುಗ್ರಹದಿಂದ ಸಂತೋಷಪಟ್ಟು ಎಲ್ಲರನ್ನೂ ಅಭಿನಂದಿಸಿ ಜ್ಯೇಷ್ಠಪುತ್ರನಾದ ವಿಜಯನ ವಿವಾಹ ಮಂಗಳ ವನ್ನು ನೆರವೇರಿಸುವ ಅಭಿಲಾಷೆಯನ್ನು ಸೂಚಿಸಿದನು. ಅಲ್ಲದೆ ಶಂಕರನಿಂದ ಲಬ್ಧವಾದ ಮತ್ತು ವಿಜಯಪ್ರದವಾದ ರತ್ನಬಾಣವನ್ನು ಮುಂದೆ ತನ್ನ ಸ್ಥಾನವನ್ನಲಂಕರಿಸುವ ಯುವರಾಜನಾದ ವಿಜಯಕುಮಾರನಿಗೆ ವಿವಾಹ ಸಮಯದಲ್ಲಿ ಕೊಟ್ಟು ಆಶೀರ್ವದಿಸಬೇಕೆಂಬ ತನ್ನ ಕುತೂಹಲವನ್ನು ತನ್ನ ಮಂತ್ರಿ ಸಾಮಾಜಿಕರಿಗೂ ರಾಜ್ಞಿಯರಿಗೂ ತಿಳಿಸಿದನು.

ಇದನ್ನು ಕೇಳಿದ ಕೂಡಲೇ ಕಿರಿಯ ಹೆಂಡಿರಾದ ಸೌದಾಮಿನಿ ಕಾದಂಬಿನಿಯರಿಗೂ, ಅವರ ಪುತ್ರರಾದ ಭಾನುತೇಜ ರಾಜಹಂಸರಿಗೂ ಹೊಟ್ಟೆಯಲ್ಲಿ ಬೆಂಕಿ ಬಿದ್ದಂತಾಯಿತು. ರತ್ನಬಾಣವೂ, ಕನ್ಯಾರತ್ನವೂ, ಸಿಂಹಾಸನಾಧಿಪತ್ಯವೂ ಎಲ್ಲವೂ ವಿಜಯನ ಪಾಲೇ ಆಗುವುವೆಂದು ಆ

ನಾಲ್ಕು ಮಂದಿಯೂ ಮನಸ್ಸಿನಲ್ಲಿ ಕುದಿದು ತಳಮಳಿಸಿ ಹೇಗಾದರೂ ಈ ವಿಜಯನ ವಿವಾಹಕ್ಕೂ, ರಾಜನಿಗೆ ಅವನಲ್ಲಿರುವ ವಿಶ್ವಾಸಕ್ಕೂ ಭಂಗವನ್ನು ತರಲೇಬೇಕೆಂದು ನಿಶ್ಚಯಿಸಿಕೊಂಡರು. ಭಾನುತೇಜನೂ ರಾಜಹಂಸನೂ, ರತ್ನಬಾಣವನ್ನು ವಿಜಯನಿಗೆ ಕೊಡಗೊಡಿಸದೆ ತಾವೇ ಪಡೆಯಬೇಕೆಂದು ಅದಕ್ಕೆ ತಕ್ಕ ಉಪಾಯವನ್ನು ಆಲೋಚಿಸಲು ತಾಯಿಯ ರನ್ನು ಕೇಳಿದರು. ಅದಕ್ಕೆ ಕಾದಂಬಿನಿಯು ಮಕ್ಕಳನ್ನು ಕುರಿತು, "ನೀವೂ ಸಹ ನಿಮ್ಮ ತಂದೆಯಾರ್ಜಿಸಿದ ವಸ್ತುಗಳನ್ನು ಪಡೆಯಲು ವಿಜಯನಂತೆಯೇ ಬಾಧ್ಯತೆಯುಳ್ಳವರಾದುದರಿಂದ ಆ ಶರವನ್ನು ನಿಮಗೆ ಕೊಡಬೇಕೆಂದು ಹಠವನ್ನು ಹಿಡಿಯಿರಿ. ಕೊಡದೆ ಇದ್ದ ಪಕ್ಷದಲ್ಲಿ ಮುಂದೆ ತಕ್ಕ ಆಲೋಚನೆ ಯನ್ನು ನಾನು ಮಾಡುವೆನು" ಎಂದು ಹೇಳಿದಳು. ಆಗಬಹುದೆಂದು ಸಂತೋಷದಿಂದ ಸಮ್ಮತಿಸಿ ಭಾನುತೇಜನೂ ರಾಜಹಂಸನೂ ಸಹ ತಂದೆಯ ಬಳಿಗೆ ಹೋಗಿ ರತ್ನಬಾಣವನ್ನು ತಮಗೇ ಕೊಡಬೇಕೆಂದು ಹಠಹಿಡಿದು ಕೇಳಿದರು. ಅದಕ್ಕೆ ರಾಜನು "ಸುಪುತ್ರರೇ! ನೀವು ಮೂರು ಮಂದಿಯೂ ಶಸ್ತ್ರಾಸ್ತ್ರ ವಿದ್ಯೆಗಳಲ್ಲಿ ನಿಪುಣರಾಗಿರುವಿರಿ. ಶಂಕರನಿಂದ ಲಬ್ಧವಾದ ಬಾಣ ವನ್ನು ಪಡೆಯಲು, ನಿಮ್ಮಲ್ಲಿ ಯಾವನು ಅತಿಶಯಪರಾಕ್ರಮಿಯೋ ಅವನೇ ಅರ್ಹನೆಂದು ನನಗೆ ತೋರುವುದು" ಎಂದನು. ಅದಕ್ಕೆ ರಾಜಪುತ್ರರಿಬ್ಬರಿಗೂ ರೋಷ ಹುಟ್ಟಿ, "ತಂದೆಯೇ ನಿನ್ನ ಪುತ್ರರಾದ ನಾವು ವಿಜಯನಿಗಿಂತಲೂ ಪರಾಕ್ರಮದಲ್ಲಿ ಕಡಿಮೆಯಾದವರೆಂದು ನೀನೆಂದಿಗೂ ತಿಳಿಯಬೇಡ. ಬೇಕಾದರೆ ಪರೀಕ್ಷಿಸು" ಎಂದರು. ಅದಕ್ಕೆ ರಾಜನು ಆಗಬಹುದೆಂದು ಸಮ್ಮತಿಸಿ ವಿಜಯನನ್ನೂ ಕರೆಯಿಸಿ, "ನಾಳೆಯ ದಿನ, ನಾನು ಒಂದು ಗುರಿ ಯನ್ನಿಟ್ಟು ನಿಮ್ಮ ಮೂರು ಮಂದಿಯ ಬಾಣ ಪ್ರಯೋಗ ಚಾತುರ್ಯ ವನ್ನೂ ಪರೀಕ್ಷಿಸುವೆನು, ಅದರಲ್ಲಿ ಯಾರು ಗೆಲ್ಲುವರೋ ಅವರಿಗೆ ರತ್ನ ಬಾಣವನ್ನು ಕೊಡುವೆನು" ಎಂದು ತಿಳಿಸಿದನು. ಮೂರು ಮಂದಿಗೂ ಬಹಳ ಸಂತೋಷವಾಯಿತು. ಭಾನುತೇಜನೂ, ರಾಜಹಂಸನೂ ತಾವೇ

ಜಯಶಾಲಿಗಳಾಗುವೆವೆಂದು ನಂಬಿ ಆನಂದದಿಂದ ನಲಿಯುತ್ತ ತಾಯಿಯ ಬಳಿಗೆ ಬಂದು ಈ ವಾರ್ತೆಯನ್ನು ತಿಳಿಸಿದರು. ಆಗ ಭಾನುತೇಜನ ತಾಯಿಯಾದ ಸೌದಾಮಿನಿಯು "ನಾಳೆಯ ದಿನದ ಪರೀಕ್ಷೆಯಲ್ಲಿ ಯಾರು ಜಯಶೀಲರಾಗುವರೆಂಬುದನ್ನು ಹೇಳಲಾಗುವುದಿಲ್ಲ. ಅದರಿಂದ ವಿಜಯನ ಮೇಲೆ ಮೊದಲೇ ರಾಜನಿಗೆ ಅಸಹನೆ ಹುಟ್ಟುವಂತೆ ಮಾಡಿದರೆ ಅನಂತರ ಉಳಿದ ನಿಮ್ಮಿಬ್ಬರಲ್ಲಿನ ಪ್ರೀತಿಯಿಂದ ಶರವನ್ನು ನಿಮಗೇ ಕೊಟ್ಟುಬಿಡುವನು. ಆದಕಾರಣ ಈ ದಿನ ರಾಜನ ಅಂತಃಪುರದಲ್ಲಿ ಇಟ್ಟಿರುವ ರತ್ನಬಾಣವನ್ನು ಗೋಪ್ಯವಾಗಿ ತಂದು ನಿಮ್ಮ ವಶಕ್ಕೆ ಕೊಡುವೆನು. ಅದನ್ನು ನೀವು ರಹಸ್ಯವಾಗಿ ವಿಜಯನ ಬತ್ತಳಿಕೆಯಲ್ಲಿ ಸೇರಿಸಿ ಮುಚ್ಚಿಡಿರಿ. ನಾಳಿನ ದಿನ ರಾಜನ ಎದುರಲ್ಲಿ ಅವನು ಬತ್ತಳಿಕೆಯನ್ನು ತೆಗೆದಾಗ ಈ ಬಾಣವು ಅವನಲ್ಲಿರುವುದನ್ನು ನೋಡಿದರೆ ರಾಜನಿಗೆ ಕೋಪ ಬರಲೇ ಬರುವುದು. ಆಗ ಆತನು, ವಿಜಯನು ಶರವನ್ನು ಕದ್ದ ದ್ರೋಹಿಯೆಂದು ಅವನಿಗೆ ಶಿಕ್ಷೆಯನ್ನು ವಿಧಿಸಿ, ನಿಮ್ಮಿಬ್ಬರಲ್ಲಿ ಒಬ್ಬರಿಗೆ ಬಾಣವನ್ನು ಕೊಡುವನು" ಎಂದು ಹೇಳಿದಳು. ಅದಕ್ಕೆ ಆಗಬಹುದೆಂದು ಅವರಿಬ್ಬರೂ ಒಪ್ಪಿದರು. ವಿಜಯನಿಗೆ ಈ ಮೋಸವೊಂದೂ ತಿಳಿಯಲೇ ಇಲ್ಲ.

ಅನಂತರ ಆದಿನ ಸಂಧ್ಯಾಸಮಯದಲ್ಲಿ ಚಂದ್ರಸೇನರಾಜನು ಜ್ಯೇಷ್ಠಪತ್ನಿಯಾದ ಶೀಲವತಿಯ ಅಂತಃಪುರವನ್ನು ಪ್ರವೇಶಿಸಿ ಆಕೆಯಿಂದ ಸತ್ಕೃತನಾಗಿ ಆಕೆಯ ಪತಿಭಕ್ತಿಗೆ ಸಂತೋಷಪಟ್ಟು ಸರಸೋಕ್ತಿಗಳನ್ನಾಡಿ ಅಲ್ಲಿಂದ ಹೊರಟು ಕಿರಿಯ ಹೆಂಡತಿಯಾದ ಸೌದಾಮಿನಿಯ ಅಂತಃಪುರಕ್ಕೆ ಬಂದನು. ಮೊದಲೇ ಕಿರಿಯ ಹೆಂಡರಿಬ್ಬರೂ ತಮ್ಮ ತಮ್ಮಲ್ಲಿ ಆಲೋಚಿಸಿಕೊಂಡಿದ್ದ ಮೇರೆಗೆ, ಸೌದಾಮಿನಿಯು ರಾಜನನ್ನು ನೋಡಿ ಬಹಳ ಖಿನ್ನಮನಸ್ಕಳಾಗಿ ಕುಳಿತಿದ್ದಳು. ರಾಜನು ಆಶ್ಚರ್ಯದಿಂದ ಆಕೆಯನ್ನು ನೋಡಿ "ಪ್ರಿಯೇ! ಸೌದಾಮಿನಿ! ರಾಜನೂ, ರಾಜ್ಯವೂ ಸಹ ಅಪರಿಮಿತ ಸಂತೋಷಸಾಗರದಲ್ಲಿ ತೇಲುತ್ತಿರುವ ಇಂತಹ ಆನಂದಕರವಾದ ಸಮಯ

ದಲ್ಲಿ ರಸಿಕಾಗ್ರಣಿಯಾದ ನೀನೇತಕ್ಕೆ ಮುಗ್ಧಭಾವವನ್ನು ವಹಿಸಿರುವೆ? ನಿನ್ನ ಚಿಂತೆಗೆ ಕಾರಣವೇನು? ಹೇಳು. ಅದನ್ನು ನಾನು ಪರಿಹರಿಸುವೆನು" ಎಂದು ಕೈ ಹಿಡಿದು ವಿನಯವಿಶ್ವಾಸಗಳಿಂದಲೂ ಮೃದುಮಧುರ ವಾಕ್ಕುಗಳಿಂದಲೂ ಪ್ರಶ್ನೆ ಮಾಡಿದನು. ಆಗ ಸೌದಾಮಿನಿಯು ರಾಜನ ವಿಷಯದಲ್ಲಿ ಅತ್ಯಂತ ಪಶ್ಚಾತ್ತಾಪ ಪಟ್ಟಂತೆ ನಟಿಸುತ್ತ "ಪ್ರಿಯಾ! ನನ್ನ ಖಿನ್ನತೆಯ ಕಾರಣವನ್ನು ತಾವು ಅನ್ಯರಿಂದ ತಿಳಿಯಬೇಕಲ್ಲದೆ ನನ್ನಿಂದ ಅದು ಹೊರಪಡಬಾರದು. ಹಾಗೆ ಅದು ನನ್ನಿಂದ ಹೊರಪಟ್ಟಲ್ಲಿ ನಾನು ಅಸೂಯಾಪರಳೆಂದು ತಮಗೆ ಭಾವನೆಯುಂಟಾದೀತು" ಎಂದಳು. ಈ ಮಾತನ್ನು ಕೇಳಿದೊಡನೆಯೇ ರಾಜನಿಗೆ ವಿಷಯವನ್ನು ತಿಳಿಯುವ ಕುತೂಹಲವು ಮತ್ತಷ್ಟು ಪ್ರಬಲವಾಯಿತು. ಆಗ ಸೌದಾಮಿನಿಯನ್ನು ನೋಡಿ "ಎಲೌ ಮನೋಹರೇ! ನಿಜಾಂಶವನ್ನು ನನಗೆ ಹೇಳುವ ವಿಷಯದಲ್ಲಿ ನೀನು ಸಂದೇಹಪಡಬಾರದು. ನೀನು ಅಸೂಯಾಪರಳಲ್ಲವೆಂಬುದನ್ನು ನಾನು ಚೆನ್ನಾಗಿ ಬಲ್ಲೆನು. ತಿಳಿದಂಶವನ್ನು ಪ್ರಿಯನಾದ ನನ್ನೊಡನೆ ಹೇಳದಿದ್ದರೆ, ನೀನು ಪತಿಯನ್ನು ವಂಚಿಸಿದವಳಾಗುವೆ. ಆದುದರಿಂದ ಯಾವ ಸಂದೇಹವೂ ಇಲ್ಲದೆ ನಿನ್ನ ಮನಸ್ಸಿನಲ್ಲಿರುವ ವಿಷಯವನ್ನು ವಿಸ್ತಾರವಾಗಿ ತಿಳಿಸಿ ನನ್ನ ಸಂಶಯವನ್ನು ಪರಿಹರಿಸು" ಎಂದು ಗಲ್ಲವನ್ನು ಹಿಡಿದು ಪ್ರಾರ್ಥಿಸಿದನು. ತಕ್ಕ ಸಮಯ ಸಂದರ್ಭಗಳು ಸಿಕ್ಕಿದುವೆಂದು ಮನಸ್ಸಿನಲ್ಲಿ ಸಂತೋಷವುಂಟಾದರೂ ಆ ಕುಟಿಲೆಯು ಬಹಳ ವ್ಯಥೆಪಟ್ಟವಳಂತೆ ನಟಿಸುತ್ತ, "ಪ್ರಿಯಾ! ಇದು ಬಹಳ ಗೋಪ್ಯವಾದ ವಿಚಾರವು. ತಮ್ಮ ಕೀರ್ತಿಗೆ ಮಾತ್ರವಲ್ಲದೆ ನಮ್ಮ ವಂಶಕ್ಕೇ ಮಹಾ ಕಳಂಕವನ್ನು ತರುವ ವಿಚಾರವು. ಅದನ್ನು ತಮ್ಮೊಡನೆ ನಾನು ಹೇಗೆ ಹೇಳಲಿ! ಅಯ್ಯೋ! ನನ್ನ ಬಾಯಿಂದ ತಮ್ಮ ಎದುರಲ್ಲಿ ಆ ವಿಚಾರವನ್ನು ಹೇಗೆ ಉಚ್ಚರಿಸಲಿ!" ಎಂದು ಸೆರಗಿನಿಂದ ಕಣ್ಣೀರನ್ನು ಒರೆಸಿಕೊಳ್ಳುವಳಂತೆ ನಟಿಸಿದಳು. ರಾಜನ ಕುತೂಹಲವೂ ಭೀತಿಯೂ ಕ್ಷಣಕ್ಷಣಕ್ಕೂ ಮಿತಿಮೀರಿ ಉಕ್ಕಿದುವು.

ಆಗ ಆತನು ಸೌದಾಮಿನಿಯ ಎರಡು ಕೈಗಳನ್ನೂ ಹಿಡಿದು, "ನೀನು ಸಂದೇಹಪಡಬೇಡ. ಅಂತಹ ವಿಚಾರವಿದ್ದಲ್ಲಿ ಅದನ್ನು ಆಪ್ತಳಾದ ನಿನ್ನಿಂದಲೇ ನಾನು ಕೇಳಬೇಕಲ್ಲದೆ ಅನ್ಯರ ಬಾಯಿಂದ ಇಂತಹ ಅಮಂಗಳ ವಿಚಾರವನ್ನು ನಾನು ಕೇಳಲೊಲ್ಲೆನು. ಮೊದಲು ಹೇಳು! ಹೇಳು. ಇನ್ನು ನನ್ನ ಮನಸ್ಸಿನ ಕುತೂಹಲವು ಮೇರೆ ಮೀರಿತು. ಇನ್ನು ಈ ವ್ಯಸನ ಸಂದೇಹಗಳನ್ನು ಬಿಡು. ನಿಜಾಂಶವನ್ನು ವಿವರಿಸಿ ತಿಳಿಸು" ಎಂದನು. ಆಗ ಆ ಮಿಟಾರಿಯು ಮೆಲ್ಲನೆ, "ಪ್ರಿಯಾ! ತಮ್ಮ ಬಲಾತ್ಕಾರದಿಂದ ನಾನು ಈಗ ವಿಷಯವನ್ನು ಹೇಳಬೇಕಾಗಿದೆ. ಯಾವ ಮಹನೀಯಳನ್ನು ಮಹಾ ಪತಿವ್ರತೆಯೂ, ಪಟ್ಟದರಸಿಯೂ ಎಂದು ತಾವು ಭಾವಿಸಿ ತಮ್ಮ ಸರ್ವ ಪ್ರೀತಿಯನ್ನೂ ಅವಳಲ್ಲಿಟ್ಟು ಆನಂದಪಡುತ್ತಿರುವಿರೋ ಆ ಮಾಯಾಂಗನೆಯಾದ ಶೀಲವತಿಯು ತಾವು ತಪಸ್ಸಿಗೆ ಹೊರಟುಹೋದುದು ಮೊದಲಾಗಿ ತನಗನುರೂಪನೆಂದು ತೋರಿದ ಪರಪುರುಷನೊಬ್ಬನಲ್ಲಿ ಅನುರಕ್ತಳಾಗಿ ನಿತ್ಯವೂ ಅವನಲ್ಲಿ ಲೀಲಾವಿನೋದದಿಂದಿರುವಳು" ಎಂದಳು. ಇದನ್ನು ಕೇಳಿದ ಕೂಡಲೇ ರಾಜನ ಎದೆಯು ಝಲ್ಲೆಂದಿತು. ಕಿವಿಗಳು ಕಿವುಡಾದುವು. ಕಣ್ಣಿಗೆ ಮಂಜು ಕವಿಯಿತು. ತಲೆಯು ಗಿರ್ರನೆ ತಿರುಗಿತು. ಬುದ್ಧಿಯು ಭ್ರಾಂತಿ ಹೊಂದಿ ರಾಜನು ಕಡಿದ ಮರದಂತೆ ಧೊಪ್ಪನೆ ನೆಲಕ್ಕೆ ಬಿದ್ದನು. ಆಗ ಸೌದಾಮಿನಿಯು ತನ್ನ ಮಂತ್ರವು ಚೆನ್ನಾಗಿ ಫಲಿಸಿತೆಂದು ಮನಸ್ಸಿನಲ್ಲಿ ಸಂತೋಷಿಸಿದರೂ ಬಹಳ ಭಯಪಟ್ಟವಳಂತೆ ನಟಿಸುತ್ತ ರಾಜನನ್ನು ಹಿಡಿದೆತ್ತಿ ಉಪಚರಿಸಿ, "ಪ್ರಿಯಾ! ಇದಕ್ಕಾಗಿಯೇ ತಮ್ಮಲ್ಲಿ ನಾನು ಇಂತಹ ವಿಷಯವನ್ನು ತಿಳಿಸಲು ಸಂಶಯಪಟ್ಟುದು. ತಾವು ಶಾಂತರಾಗಬೇಕು" ಎಂದು ಬೇಳುವೆಯ ಮಾತುಗಳಿಂದ ಕುಲುಕಿದಳು. ಆಗ ರಾಜನು, "ಅಯ್ಯೋ! ನಿರ್ಮಲವಾದ ಈ ರಾಜವಂಶವು ಇಂತಹ ಕುಲಟೆಯಿಂದ ಕಳಂಕವನ್ನು ಪಡೆಯಿತೇ! ಶಿವಶಿವಾ!" ಎಂದು ದುಃಖಿಸಿ ಮತ್ತೆ ಆಲೋಚಿಸಿ, "ಎಲೌ! ಸೌದಾಮಿನೀ! ನನ್ನ ಶೀಲವತಿಯು ಮಹಾ

ಪತಿವ್ರತೆಯು ! ಕುಲಟೆಯಲ್ಲ! ನೀನು ಹೇಳುವ ಮಾತು ನಿಶ್ಚಯವೇ ? ನನ್ನ ಪ್ರಿಯೆಯಾದ ಶೀಲವತಿಯು ನನ್ನನ್ನು ವಂಚಿಸಿ ದುರ್ಮಾರ್ಗ ಪ್ರವರ್ತಕಳಾದಳೇ ? ನಾನು ನಂಬಲಾರೆನು " ಎಂದನು. ಅದಕ್ಕೆ ಆ ಮಾಯಾವಿನಿಯು "ಪ್ರಿಯಾ! ಇದಕ್ಕೇ ನಾನು ಈ ವಿಚಾರವನ್ನು ತಮ್ಮಲ್ಲಿ ತಿಳಿಸಲೊಲ್ಲೆನೆಂದು ಮೊದಲೇ ವಿಜ್ಞಾಪಿಸಿಕೊಂಡೆನು. ಆದರೂ ಬಲಾತ್ಕರಿಸಿ ನನ್ನಿಂದ ಹೇಳಿಸಿ ಈಗ ಅರಮನೆಯಲ್ಲಿ ಎಲ್ಲರೂ ನೋಡಿರುವ ವಿಷಯವನ್ನು ತಾವು ನಂಬುವುದಿಲ್ಲವೆಂದರೆ ನಾನು ಅಸೂಯಾಪರಳಾಗಿ ಅನ್ಯಾಯವಾಗಿ ಅವಳನ್ನು ದೂರಿದವಳಾದೆನು. ಚಿಂತೆಯಿಲ್ಲ. ನಾನು ತಮ್ಮಲ್ಲಿ ಅನೃತವನ್ನಾಡಿದೆನೆಂಬ ಭಾವನೆಯು ತಮಗುಂಟಾಗಿದ್ದರೆ, ತಾವೂ ತಮ್ಮ ಶೀಲವತಿಯೂ ಆನಂದದಿಂದಿರಿ. ನಾನು ಈ ಪ್ರಾಣವನ್ನೇ ಇರಿಸಲಾರೆನು. ದೂರು ಹೇಳಿದೆನೆಂಬ ಅಪವಾದವು ನನಗೆ ತಮ್ಮಿಂದಲೇ ಬಂದ ಮೇಲೆ ನಾನು ಈ ಭೂಮಿಯಲ್ಲಿ ಬಾಳಲಾರೆನು. ವಿಷಪಾನದಿಂದಲಾದರೂ ಪ್ರಾಣತ್ಯಾಗ ಮಾಡಿಕೊಳ್ಳುವೆನು " ಎಂದು ಗೊಳಗೊಳನೆ ಅಳುವುದಕ್ಕಾರಂಭಿಸಿದಳು. ಉಭಯ ಸಂಕಟಗಳಿಗೆ ಸಿಕ್ಕಿದ ರಾಜನು ದಿಕ್ಕುತೋರದೆ, "ಪ್ರಿಯೇ ! ನಿನ್ನ ಮಾತಿನಲ್ಲಿ ನನಗೆ ನಂಬಿಕೆಯುಂಟು. ಆದರೆ ನಾನು ಸುಶೀಲವತಿಯೆಂದು ತಿಳಿದಿದ್ದ ಆ ಶೀಲವತಿಯು ದುಶ್ಶೀಲವತಿಯಾದುದಕ್ಕಾಗಿ ಆಶ್ಚರ್ಯಪಟ್ಟು ಹಾಗೆಂದೆನು. ನನ್ನನ್ನು ಕ್ಷಮಿಸು. ಬಾ ದುಃಖಿಸಬೇಡ!" ಎಂದು ಸಂತೈಸಿದನು. ಅದಕ್ಕೆ ಆ ಮಾಯೆಗಾತಿಯು "ಪ್ರಿಯಾ! ನನ್ನ ಮಾತಿನಲ್ಲಿ ತಮಗೆ ನಂಬುಗೆ ಇಲ್ಲದಿದ್ದರೆ ಹೋಗಲಿ. ತಮ್ಮ ಪರಮಪ್ರೀತಿಗೆ ಪಾತ್ರಳಾಗಿರುವ ನಿಮ್ಮ ಕಾದಂಬಿನಿಯನ್ನಾದರೂ ಕೇಳಿ ನಿಜಾಂಶವನ್ನು ದೃಢಪಡಿಸಿಕೊಳ್ಳಿ" ಎಂದು ಹೇಳಿ ಸರಸರನೆ ಕುಲುಕಿಕೊಂಡು ಹೋಗಿ ಸವತಿಯಾದ ಕಾದಂಬಿನಿಯನ್ನು ಕರೆತಂದಳು. ಮೊದಲೇ ಉರಿಯುತ್ತಿರುವ ಬೆಂಕಿಗೆ ಗಾಳಿಯೂ ಬೀಸಿದಂತೆ ಕುಟಿಲ ಸೌದಾಮಿನಿಯ ಜೊತೆಗೆ ಕುತ್ಸಿತ ಕಾದಂಬಿನಿಯೂ ಬಂದು ನಿಂತಳು. ಆಗ ಆಶ್ಚರ್ಯ

ವ್ಯಸನ ಕೋಪಗಳಿಂದ ಕರ್ತವ್ಯವನ್ನರಿಯದೆ ನಿಂತಿದ್ದ ರಾಜನು ಕಾದಂಬಿನಿಯ ಮುಖವನ್ನು ನೋಡಿ ತಲೆಯನ್ನು ತಗ್ಗಿಸಿದನು. ಸೌದಾಮಿನಿಯು ಕಾದಂಬಿನಿಯನ್ನು ನೋಡಿ "ತಂಗೀ! ಆರ್ಯಪುತ್ರನು ತಪಸ್ಸಿಗೆ ಹೋಗಿದ್ದ ಕಾಲದಲ್ಲಿ ಅಂತಃಪುರದಲ್ಲಿ ಏನೇನು ವಿಷಯಗಳು ನಡೆಯುತ್ತಿದ್ದುವೆಂಬುದನ್ನು ನೀನಾದರೂ ತಿಳಿಸಿ ಆತನ ಮನಸ್ಸಿನ ಸಂಶಯವನ್ನು ಪರಿಹರಿಸು. ಅದಕ್ಕಾಗಿಯೇ ನಾನು ನಿನ್ನನ್ನು ಕರೆತಂದುದು" ಎಂದಳು. ಅದಕ್ಕೆ ಆ ಠಕ್ಕುಮಾರಿಯು "ಅಕ್ಕಾ! ಮಾಡಿದವರ ಪಾಪವು ಆಡಿದವರ ಬಾಯಲ್ಲಿ" ಎಂಬ ಗಾದೆಯನ್ನು ಕೇಳಲಿಲ್ಲವೇ? ಅದರಿಂದ ನಾವೇತಕ್ಕೆ ದೊಡ್ಡವರ ದೋಷಗಳನ್ನು ಬಿಚ್ಚಿ ಆರ್ಯಪುತ್ರನ ಕೋಪಕ್ಕೆ ಒಳಗಾಗಬೇಕು? ಕ್ರಮಕ್ರಮವಾಗಿ ಆತನಿಗೇ ತಿಳಿಯುವುದು. ಮುಖ್ಯವಾಗಿ ಶೀಲವತಿಯು ಪಟ್ಟದರಸಿಯು, ನಾವುಗಳು ಅವಳ ಹಿಂದಿನವರು. ಇದರಿಂದ ಆಕೆಯ ದೋಷಗಳನ್ನು ನಾವುಗಳು ಹೇಳಿದಲ್ಲಿ ನಾವೇ ಅಸೂಯಾಪರರೆಂದು ಆರ್ಯಪುತ್ರನಿಗೆ ತೋರಬಹುದು. ಇದರಿಂದ ನಾವು ಬಾಯಿಂದ ಹೇಳುವುದಕ್ಕಿಂತಲೂ ವಿಷಯವನ್ನು ಪ್ರತ್ಯಕ್ಷವಾಗಿ ತೋರಿಸಿದರಾಯಿತಲ್ಲವೇ? ಕೈ ಹುಣ್ಣಿಗೆ ಕನ್ನಡಿಯೇಕೆ? ಪ್ರಭುವು ಅರಮನೆಯಲ್ಲಿರುವಾಗಲೇ ಅಂತಃಪುರಕ್ಕೆ ಪರಪುರುಷನು ಪ್ರವೇಶಿಸುತ್ತಿರುವಲ್ಲಿ ಇನ್ನು ಆತನು ಕಣ್ಮರೆಯಾಗಿದ್ದಾಗ ಸ್ಥಿತಿಯು ಯಾವರೀತಿಯಿತ್ತೆಂಬುದನ್ನು ಆತನೇ ಊಹಿಸಲಿ" ಎಂದಳು. ಇದನ್ನು ಕೇಳಿ ರಾಜನ ಮನಸ್ಸಿನಲ್ಲಿ ಮತ್ತಷ್ಟು ಶೂಲವಿರಿದಂತಾಗಿ, ಸೌದಾಮಿನಿಯ ಮಾತು ನಿಜವೆಂದು ದೃಢಪಟ್ಟಿತು. ಆಗ ಕೋಪತಾಪಗಳನ್ನು ಸಹಿಸಲಾರದೆ "ಎಲಾ! ಈಗಲೂ ಅಂತಹ ಅವಿವೇಕಗಳು ನನ್ನ ಅಂತಃಪುರದಲ್ಲಿ ನಡೆಯುತ್ತಿರುವುವೇ?" ಎಂದು ಗಜರಿದನು. ಅದಕ್ಕೆ ಕಾದಂಬಿನಿಯು "ಆರ್ಯಪುತ್ರನು ಈ ಕೋಪವನ್ನು ಸ್ವಲ್ಪ ಸೈರಿಸಿ ಈ ದಿನ ಅರ್ಧರಾತ್ರಿಯಲ್ಲಿ ನಮ್ಮೊಡನೆ ಶೀಲವತಿಯ ಅಂತಃಪುರಕ್ಕೆ ಗೋಪ್ಯವಾಗಿ ಬಂದರೆ ಆ ವಿಚಾರವು ಪ್ರತ್ಯಕ್ಷವಾಗಿ ವೇದ್ಯವಾಗುವುದು,"

ಎಂದಳು. ಅದಕ್ಕೆ ರಾಜನು ಸಮ್ಮತಿಸಿ ಆ ರಾತ್ರಿ ಹನ್ನೆರಡು ಘಂಟೆಗೆ ಸರಿಯಾಗಿ ತಾನು ಶೀಲವತಿಯ ಅಂತಃಪುರದ ಬಳಿಗೆ ಬರುವುದಾಗಿ ಹೇಳಿ, ಶೀಲವತಿಯ ವಿಷಯದಲ್ಲಿ ತಾನು ಇಟ್ಟಿದ್ದ ನಂಬಿಕೆಯೆಲ್ಲವೂ ವ್ಯರ್ಥ ವಾಯಿತೆಂಬ ಪಶ್ಚಾತ್ತಾಪದಿಂದಲೂ, ತನ್ನ ಪತ್ನಿಯು ಕುಲಟೆಯೆನಿಸಿದ ಳೆಂಬ ಅವಮಾನದಿಂದಲೂ ಮುಗ್ಧನಾಗಿ ಚಿಂತಾಗಾರವನ್ನು ಸೇರಿದನು.

ಇತ್ತಲಾ ಮಾಯೆಕಾತಿಯರಾದ ಸೌದಾಮಿನಿ ಕಾದಂಬಿನಿಯರು ತಮ್ಮ ಮಾತನ್ನು ರಾಜನಿಗೆ ನಿದರ್ಶನದಿಂದ ದೃಢಪಡಿಸಲು ತಮ್ಮ ತಮ್ಮಲ್ಲಿ ಆಲೋಚಿಸಿಕೊಂಡು ಆಪ್ತಸಖಿಯಾದ ಸರಸಾಂಗಿಯೆಂಬುವಳನ್ನು ಕರೆದು ಆದರಿಸಿ, ಅವಳಿಗೆ ಬೆಲೆಬಾಳುವ ರತ್ನಹಾರವೊಂದನ್ನು ಲಂಚವನ್ನಾಗಿ ಕೊಟ್ಟು, "ಎಲೌ ಸರಸಾಂಗೀ ಈ ರಾತ್ರಿ ಶೀಲವತಿಯು ಅಂತಃಪುರದಲ್ಲಿ ಒಂಟಿಯಾಗಿ ಮಲಗಿರುವಳು. ನೀನು ಪುರುಷವೇಷವನ್ನು ಧರಿಸಿ, ಅವಳು ನಿದ್ರಾಸಕ್ತಳಾಗಿರುವಾಗ ಅಲ್ಲಿಗೆ ಹೋಗಿ ಅವಳ ಬಳಿಯಲ್ಲಿ ಸುಳಿದಾಡುತ್ತಿರು. ಅಲ್ಲಿಗೆ ನಾವುಗಳು ರಾಜನೊಡನೆ ಬರುವೆವು. ಆಗ ರಾಜನು ನಿನ್ನನ್ನು ಪುರುಷನೆಂಬ ಭ್ರಾಂತಿಯಿಂದ ಶಿಕ್ಷಿಸುವನು. ಸಮುಗಾಗಿ ನೀನು ಆ ಶಿಕ್ಷೆ ಯನ್ನು ಸ್ವಲ್ಪ ಸಹಿಸಿಕೊಂಡು ಓಡಿಹೋಗು. ಅನಂತರ ನಾಳಿನ ಪ್ರಾತಃ ಕಾಲ ನಿನಗೆ ಬೇಕಾದಷ್ಟು ಹಣವನ್ನೂ ವಸ್ತ್ರಾಭರಣಗಳನ್ನೂ ಕೊಟ್ಟು ನಿನ್ನನ್ನು ಐಶ್ವರ್ಯದಲ್ಲಿ ತೇಲಿಸಿಬಿಡುವೆವು" ಎಂದರು. ಅದಕ್ಕೆ ಸರಸಾಂಗಿಯು ನಡುಗುತ್ತ, "ತಾಯಿ ! ಅರ್ಧರಾತ್ರಿಯಲ್ಲಿ ಪುರುಷವೇಷ ದಿಂದ ನಾನು ಹೋದರೆ ಆ ಕಾವಲುಗಾರರು ನನ್ನನ್ನು ಒಳಗೆ ಬಿಡು ವರೇ ? ಅಥವಾ ನಾನು ಒಳಗೆ ಉಪಾಯದಿಂದ ಹೋದರೂ ಅಪರಾಧಿ ಯೆಂದು ತಿಳಿದು ರಾಜನು ನನ್ನನ್ನು ಅಲ್ಲಿಯೇ ನಿರ್ಬಂಧಿಸದಿರುವನೇ ? ಅಥವಾ ಶೂಲಕ್ಕೇರಿಸದಿರುವನೇ ? ಇದರಲ್ಲಿ ನನ್ನ ಪ್ರಾಣಕ್ಕೆ ಅಪಾಯ ಬರುವುದಿಲ್ಲವೇ ?" ಎಂದಳು. ಅದಕ್ಕೆ ಸೌದಾಮಿನಿಯು "ಎಲೌ ! ನೀನು ಹೆದರಬೇಡ. ಅಂತಃಪುರದ ಕಾವಲುಗಾರರಿಗೆ ಲಂಚವನ್ನು ಕೊಟ್ಟು

ಅವರನ್ನು ನಾವುಗಳು ಆಗಲೇ ನಮ್ಮ ಪಕ್ಷವಾಗಿ ತಿರುಗಿಸಿಕೊಂಡಿರು ವೆವು. ಅಲ್ಲದೆ ನೀನು ಅಲ್ಲಿಗೆ ಬರುವ ಕಾಲದಲ್ಲಿ ನಾವೂ ನಿನ್ನೊಡನೆ ಇದ್ದು ಕಿಟಕಿಯಿಂದ ನಿನ್ನನ್ನು ಒಳಕ್ಕೆ ಕಳುಹಿಸುವೆವು. ರಾಜನು ನಿನ್ನನ್ನು ಶಿಕ್ಷಿಸಲು ಬಂದಾಗ ಉಪಾಯದಿಂದ ನಿನ್ನನ್ನು ನಾವು ಆತನ ಕೈಯಿಂದ ಬಿಡುಗಡೆ ಮಾಡುವೆವು; ಅಂಜಬೇಡ. ಧೈರ್ಯವಾಗಿ ನಾವು ಹೇಳಿದಂತೆ ನಡೆ,'' ಎಂದು ವಿಧವಿಧವಾಗಿ ಧೈರ್ಯವನ್ನು ಹೇಳಿ ಹುರಿದುಂಬಿಸಿ ಪುರುಷವೇಷದ ಉಡುಪನ್ನು ತಂದು ಅವಳಿಗೆ ತಾವೇ ಚೆನ್ನಾಗಿ ಅಲಂಕಾರಮಾಡಿದರು. ಸ್ವಲ್ಪ ಹೊತ್ತಿನೊಳಗಾಗಿ ಸರಸಾಂಗಿಯು ಸರಸಾಂಗನಾದಳು. ನಿಲುವುಗನ್ನಡಿಯನ್ನು ನೋಡಿಕೊಂಡು, ಸರ ಸಾಂಗಿಯು ಕನ್ನಡಿಯಲ್ಲಿ ಕಾಣುವ ಸರಸಾಂಗನಲ್ಲಿ ಮೋಹಪರವಶ ಳಾಗಿ ಭ್ರಾಂತಿಯಿಂದ ಮುಂಬರಿದು ಕನ್ನಡಿಯ ಮೇಲೆ ಬೀಳುತ್ತಿದ್ದಳು. ಸವತಿಯರಿಬ್ಬರೂ ನಕ್ಕು ಅವಳ ಪುರುಷರೂಪದ ಅಂದಕ್ಕೂ ತಾವು ಮಾಡಿದ ಅಲಂಕಾರದ ಚಾತುರ್ಯಕ್ಕೂ ತಮ್ಮ ತಮ್ಮಲ್ಲಿಯೇ ಸಂತೋಷ ಪಟ್ಟು ವಿನೋದದಿಂದ ಸರಸಾಂಗನನ್ನು ಪರಿಹಾಸ್ಯಮಾಡುತ್ತ, ಧೈರ್ಯ ಹೇಳುತ್ತ ಇದ್ದು, ಹನ್ನೆರಡು ಘಂಟೆಗಳಿಗೆ ಮುಂಚೆಯೇ ಶೀಲವತಿಯ ಅಂತಃಪುರದ ಬಳಿಗೆ ಬಂದು ಮೊದಲೇ ಏರ್ಪಡಿಸಿದ್ದಂತೆ ಕಾವಲುಗಾರರ ಸಹಾಯದಿಂದ ಪುರುಷವೇಷಧಾರಿಣಿಯನ್ನು ಒಳಹೊಗಿಸಿದರು.

ಕೌಟಿಲ್ಯವನ್ನರಿಯದ ಶೀಲವತಿಯಾದರೋ ಎಂದಿನಂತೆ ತಲ್ಪದಮೇಲೆ ಗಾಢ ನಿದ್ರೆಯಲ್ಲಿ ಮಲಗಿದ್ದಳು. ಸರಸಾಂಗನು ಸಪ್ಪುಳಾಗದಂತೆ ಮೆಲ್ಲನೆ ಮುಂದೆ ಬಂದು, ಸ್ವಲ್ಪ ಹೊತ್ತು ನಿಂತು ರಾಣಿಯನ್ನು ನೋಡಿ, ಬಳಿಗೆ ಹೋಗಲು ಧೈರ್ಯವಿಲ್ಲದೆ ಅನುಮಾನಿಸುತ್ತಿದ್ದನು. ರಾಣಿಯು ಒಂದು ವೇಳೆ ಎಚ್ಚರವಾಗಿ ತನ್ನನ್ನು ಯಾರೆಂದು ಪ್ರಶ್ನೆಮಾಡಿದರೆ ಏನನ್ನು ಹೇಳಬೇಕೆಂಬುದೇ ಮೊದಲಾದ ವಿಧವಿಧಾಲೋಚನೆಗಳು ಇವಳ ಮನಸ್ಸಿ ನಲ್ಲಿ ಉಂಟಾದುವು. ಹೇಗಾದರೂ ತನ್ನ ಪ್ರಾಣಕ್ಕೆ ಸೌದಾಮಿನಿ

ಕಾದಂಬಿನಿಯರು ಹೊಣೆಯಾಗಿರುವರೆಂಬ ಭರವಸವು ಮಾತ್ರ ಆಗಾಗ ಇವಳಿಗೆ ಧೈರ್ಯವನ್ನುಂಟುಮಾಡುತ್ತಿದ್ದಿತು. ಹೀಗೆ ಸ್ವಲ್ಪ ಹೊತ್ತು ಆಲೋಚನೆಯಲ್ಲಿಯೇ ಸ್ತಬ್ಧಳಾಗಿ ಶೀಲವತಿಯು ಮಂಚದ ಬಳಿಯಲ್ಲಿ ನಿಂತಿದ್ದಳು. ಇಷ್ಟು ಹೊತ್ತಿಗೆ ಹನ್ನೆರಡು ಘಂಟೆ ಹೊಡೆಯಿತು. ರಾಜನು ಸಂಕೇತದಂತೆ ಅಂತಃಪುರಕ್ಕೆ ಬರುವುದರೊಳಗಾಗಿ ಕಾದಂಬಿನಿ ಸೌದಾಮಿನಿಯರೂ ಸಹ ಗೋಚರವಾದರು. ರಾಜನು ಮೆಲ್ಲನೆ ಇವರ ಬಳಿಗೆ ಬಂದನು. ಕಾದಂಬಿನಿಯು ರಾಜನ ಕೈಯನ್ನು ಹಿಡಿದು ಮೆಲ್ಲನೆ ಕಿಟಕಿಯ ಬಳಿಗೆ ಕರೆತಂದು ಸಣ್ಣ ಕಿಂಡಿಯಲ್ಲಿ ತೋರಿಸಿ, "ಪ್ರಿಯಾ! ಇದೋ! ಅಂತಃಪುರದ ರಹಸ್ಯವು ಪ್ರತ್ಯಕ್ಷವಾಗಿರುವುದು: ಅವಲೋಕಿಸಬೇಕು. ಈಗಲಾದರೂ ನಮ್ಮ ಮಾತು ನಿಜವೋ ಅಥವಾ ಅಸೂಯಾಜನಿತವಾದುದೋ ಎಂಬುದನ್ನು ಚಿತ್ತಕ್ಕೆ ತರಬೇಕು" ಎಂದಳು. ಅದಕ್ಕೆ ಸೌದಾಮಿನಿಯು "ತಂಗೀ! ಕಾದಂಬಿನೀ! ಪ್ರತ್ಯಕ್ಷವಾಗಿ ಕಾಣುತ್ತಿರುವ ವಿಷಯವನ್ನು ನೋಡಿದ ಮೇಲೆ ಆರ್ಯಪುತ್ರನು ನಮ್ಮನ್ನು ಅಸೂಯಾಪರರೆಂದು ಎಂದಿಗೂ ಭಾವಿಸಲಾರನು" ಎಂದಳು. ರಾಜನಿಗೆ ಅವಮಾನವೂ ವ್ಯಸನವೂ ಕೋಪವೂ ಮೇರೆ ಮೀರಿದ್ದರೂ ವಿಷಯವು ಬಹಿರಂಗಪಡಿಸತಕ್ಕುದಲ್ಲವಾದುದರಿಂದ, ಮಂತ್ರ ಬಂಧಿತವಾದ ಘಟಸರ್ಪದಂತೆ ತನ್ನಲ್ಲಿ ತಾನೇ ಕುದಿದು ಕುದಿದು ಸ್ತಬ್ಧನಾಗಿ ನಿಂತಿದ್ದು, ಕಡೆಗೆ ಸಹಿಸಲಾರದೆ ಅಂತಃಪುರದ ಬಾಗಿಲನ್ನು ಬಲವಾಗಿ ಒದೆದು, "ಬಾಗಿಲನ್ನು ತೆರೆ" ಎಂದು ಸಿಂಹಾರ್ಭಟದಿಂದ ಕೂಗಿದನು. ಗಾಢನಿದ್ರೆಯಲ್ಲಿದ್ದ ಶೀಲವತಿಯು ಬೆಚ್ಚಿಬಿದ್ದು ತಟ್ಟನೆ ಮೇಲಕ್ಕೆ ಏಳುವಷ್ಟರೊಳಗಾಗಿ ಸರಸಾಂಗನು ಹಿಂದಣಿಂದ ಫಕ್ಕನೆ ಮಂಚದ ಕೆಳಗೆ ಇಳಿಯ ಬಿದ್ದಿದ್ದ ತೆರೆಯಲ್ಲಿ ತೂರಿ ಮರೆಯಾದನು. ಶೀಲವತಿಯು ರಾಜನ ಧ್ವನಿಯನ್ನು ಕೇಳಿ ಬೇಗನೆ ಓಡಿ ಬಂದು ಕದವನ್ನು ತೆರೆದಳು. ಆ ಕೂಡಲೇ ಕಣ್ಣುಗಳಿಂದ ಕೆಂಡಗಳನ್ನು ಸುರಿಸುತ್ತ ರಾಜನು ಸಿಡಿಲಿನಂತೆ ಆರ್ಭಟಿಸಿ, ಶೀಲವತಿಯನ್ನು

ಹಿಡಿದು, ಶಿರಸ್ಸನ್ನು ಕಡಿಯುವುದಕ್ಕಾಗಿ ಸೊಂಟದಿಂದ ಕತ್ತಿಯನ್ನೆಳೆಯಲು ವಷ್ಟರಲ್ಲಿ ಸೌದಾಮಿನಿಯೂ ಕಾದಂಬಿನಿಯೂ ಬೇಗನೆ ಬಂದು ರಾಜನ ಕೈಗಳನ್ನು ಹಿಡಿದು, "ಸೈರಿಸು, ಪ್ರಿಯಾ! ಸೈರಿಸು. ವಿಷಯವೇನೆಂಬುದನ್ನು ವಿವರವಾಗಿ ವಿಚಾರಿಸದೆ ಅಕ್ಕನನ್ನು ಶಿಕ್ಷಿಸಬೇಡ. ಸ್ವಲ್ಪ ಸೈರಿಸು" ಎಂದು ಹೇಳಿ ಸಮಾಧಾನಪಡಿಸುವಂತೆ ನಟಿಸಿ, ಶೀಲವತಿಯನ್ನು ರಾಜನ ಕೈಯಿಂದ ಬಿಡಿಸಿ ದೂರವಾಗಿ ಕರೆದುಕೊಂಡು ಹೋದರು. ಸತ್ಯಶೀಲೆಯಾದ ಶೀಲವತಿಯು, ಇವರು ಪರಮ ಸತ್ಯವಂತರೂ, ದಯಾವಂತರೂ ಎಂದು ತಿಳಿದು, "ಎಲೈ ತಂಗಿಯರಿರಾ! ನೀವೇ ನನ್ನ ಭಾಗದ ಭಾಗ್ಯದೇವತೆಯರು. ನನ್ನ ಪ್ರಾಣವನ್ನುಳಿಸಿದ ಪುಣ್ಯಶೀಲೆಯರು; ಆರ್ಯಪುತ್ರನಿಗೆ ನನ್ನ ಮೇಲೆ ಇಷ್ಟು ಆಗ್ರಹವುಂಟಾಗಲು ಕಾರಣವೇನು? ನಿಮಗೇನಾದರೂ ತಿಳಿದಿದ್ದರೆ ದಯವಿಟ್ಟು ತಿಳಿಸಿರಿ. ನನ್ನ ಅಪರಾಧಗಳೇನಾದರೂ ಇದ್ದಲ್ಲಿ ನಾನು ಆತನ ಪಾದಗಳ ಮೇಲೆ ಬಿದ್ದು ಕ್ಷಮೆಯನ್ನು ಬೇಡಿಕೊಳ್ಳುವೆನು" ಎಂದು ವಿನಯದಿಂದ ಕೇಳಿಕೊಂಡಳು. ಆಗ ಸೌದಾಮಿನಿಯು "ಅಕ್ಕಾ! ಇದಕ್ಕೆ ಕಾರಣವೇನೆಂಬುದು ನಮಗೂ ತಿಳಿಯದು. ಆರ್ಯಪುತ್ರನು ಕೋಪದಲ್ಲಿರುವನು; ಈಗ ಆತನ ಎದುರಿಗೇ ನೀನು ನಿಲ್ಲಬೇಡ ಬಾ." ಎಂದು ದೂರವಾಗಿ ಕರೆದುಕೊಂಡು ಹೋದಳು. ನರಸಾಂಗನು ಮಂಚದ ಕೆಳಗೆ ತೂರಿ ಅಡಗಿಕೊಂಡುದನ್ನು ಬಾಗಿಲ ಕಿಂಡಿಯಿಂದ ನೋಡಿದ್ದ ರಾಜನು ಮುಂದೆ ನುಗ್ಗಿ ಮಂಚದ ಮುಸುಕಿನೊಳಗಿದ್ದ ವೇಷಧಾರಿಯನ್ನು ಪುರುಷನೆಂದೇ ಭಾವಿಸಿ, ಹಿಡಿದೆಳೆದು ತರುವುದರೊಳಗಾಗಿ ಕಾದಂಬಿನಿಯು ಬೇಗನೆ ಬಂದು ರಾಜನ ಕೈಯನ್ನು ಹಿಡಿದು, "ನಿಲ್ಲು, ನಿಲ್ಲು ಪ್ರಿಯಾ! ಇವನನ್ನು ವಧಿಸಬೇಡ. ಇನ್ನೂ ವಿಷಯಗಳೇನಿರುವುವೋ ನಾಳಿನ ದಿನ ಇವನನ್ನು ಕ್ರಮವಾಗಿ ರಹಸ್ಯದಲ್ಲಿ ವಿಚಾರಿಸಿ, ಇವನಿಗೆ ತಕ್ಕ ಶಿಕ್ಷೆಯನ್ನು ವಿಧಿಸಬಹುದು. ಇದು ಆಗ್ರಹದ ಸಮಯವು. ಈಗ ದುಡುಕುವುದುಚಿತವಲ್ಲ; ಸ್ವಲ್ಪ ಸೈರಿಸು" ಎಂದು ಮಹಾವಿನಯ

ದಿಂದ ರಾಜನ ಪಾದಗಳ ಮೇಲೆ ಬಿದ್ದು ಬೇಡಿಕೊಂಡಳು. ಆಗ ರಾಜನು ತನ್ನ ವಂಶಕ್ಕೇ ಕಲಂಕವುಂಟಾಗಿ ತಾನು ಮಹಾಪಮಾನಕ್ಕೆ ಗುರಿಯಾದೆ ನೆಂದು ಖೇದಗೊಂಡಿದ್ದರೂ, ಕಿರಿಯ ಹೆಂಡತಿಯ ಬೇಳುವೆಯ ಮಾತುಗಳಿಗೆ ಸೋತು ಸ್ವಲ್ಪ ಹೊತ್ತು ಸ್ತಬ್ಧನಾಗಿದ್ದು ಕಡೆಗೆ ಅಪರಾಧಿಗಳಿಬ್ಬರನ್ನೂ ಕಾರಾಗೃಹದ ಬೇರೆಬೇರೆ ಕೊಟಡಿಗಳಲ್ಲಿ ಸೇರಿಸಿ ಬಲವಾದ ಬೀಗಗಳನ್ನು ಹಾಕಿ ಬೀಗದ ಕೈಗಳನ್ನು ತಾನೇ ತೆಗೆದುಕೊಂಡು ಅರಮನೆಗೆ ಬಂದನು. ಮತ್ತು, ಪತಿವ್ರತೆಯೆಂದು ತಾನು ನಂಬಿ ಪ್ರೀತಿಸುತ್ತಿದ್ದ ತನ್ನ ಪತ್ನಿಯು ಕುಲಟೆಯಾಗಿ ತನಗೆ ದ್ರೋಹಮಾಡಿ ತನ್ನ ವಂಶಕ್ಕೇ ಕಳಂಕವನ್ನು ತಂದ ಳೆಂಬ ದುಃಖಾಪಮಾನಗಳಿಂದ ತಪ್ತನಾಗಿ ನಿದ್ರೆಯಿಲ್ಲದೆ ಆ ರಾತ್ರಿಯನ್ನು ಮಹಾ ವ್ಯಥೆಯಿಂದಲೇ ಕಳೆದನು.

---

# ತೃತೀಯ ತರಂಗ

ಬೆಳಗಾಯಿತು. ದಿನರಾಜನಾದ ಪ್ರಭಾಕರನು ತನ್ನ ಸಹಸ್ರಕಿರಣ ಗಳಿಂದ ಲೋಕಕ್ಕೆ ಆನಂದವನ್ನುಂಟುಮಾಡಿ ದಿಕ್ತಟಗಳನ್ನು ಬೆಳಗಲಾರಂಭಿ ಸಿದನು. ಜಯಶಾಲಿಯಾಗಿ ರತ್ನಬಾಣವನ್ನು ಪಡೆಯಬೇಕೆಂಬ ಕುತೂ ಹಲದಿಂದಿದ್ದ ವಿಜಯನು ಎದ್ದು ಎಂದಿನಂತೆ ತಾಯಿಯಂತಃಪುರಕ್ಕೆ ಬಂದು ನೋಡಲು, ಅಲ್ಲಿ ಆಕೆ ಇರಲಿಲ್ಲ. ಆಶ್ಚರ್ಯದಿಂದ ವಿಚಾರಿಸುವಲ್ಲಿ, ರಾತ್ರಿ ನಡೆದ ಸಂಗತಿಯು ಅಲ್ಲಿದ್ದ ಚೇಟಿಯರಿಂದ ತಿಳಿಯಬಂತು. ತನ್ನ ತಾಯಿಯು ದುರಾಚಾರಿಣಿಯೆಂದು ರಾಜನು ಆಕೆಯನ್ನು ಕಾರಾಗೃಹದಲ್ಲಿಟ್ಟಿರುವನೆಂಬ ವಾರ್ತೆಯನ್ನು ಕೇಳಿದಕೂಡಲೆ ವಿಜಯನ ಕಿವಿಗಳಲ್ಲಿ ಕಾಯಿಸಿದ ಸೀಸವನ್ನು ಸುರಿದಂತಾಯಿತು. ಆದರೆ ತನ್ನ ತಾಯಿಯು ಮಹಾ ಪತಿವ್ರತೆಯೂ, ಶೀಲವತಿಯೆಂಬ ನಾಮಕ್ಕೆ ತಕ್ಕಗುಣವತಿಯೂ ಎಂಬ ವಿಚಾರವು ಮಾತ್ರ

ವಿಜಯನ ಮನಸ್ಸಿನಲ್ಲಿ ದೃಢವಾಗಿತ್ತು. ಆದುದರಿಂದ ಆಕೆ ಅಂತಹ ದುರಾಚಾರಿಣಿ ಯಾಗಿರಲಾರಳೆಂದು ನಂಬಿ, ಕೂಡಲೇ ತಂದೆಯ ಬಳಿಗೆ ಹೋಗಿ ನಮಸ್ಕರಿಸಿ, "ಜನಕಾ! ಮಾತೆಯಾದ ಶೀಲವತಿಯ ಗುಣವನ್ನು ನೀನು ಪರೀಕ್ಷಿಸಿದರೆ ಆಕೆಯು ನಿರ್ದೋಷಿಯೆಂಬುದು ನಿನ್ನ ಗೋಚರಕ್ಕೆ ಬಾರದೆ ಇರದು. ಆ ಮಹಾ ಪತಿವ್ರತೆಯ ವಿಷಯದಲ್ಲಿ ನೀನು ದಯೆಯನ್ನು ತೋರಿಸು." ಎಂದು ಬೇಡಿಕೊಂಡನು. ಆದಕ್ಕೆ ರಾಜನು "ಎಲವೋ! ವಿಜಯಾ! ನಿಮ್ಮ ತಾಯಿಯ ಶೀಲವನ್ನು ನಾನೇ ಪ್ರತ್ಯಕ್ಷವಾಗಿ ನೋಡಿದೆನು. ಆದಕಾರಣ ನಿನ್ನ ವಾದವು ನನಗೆ ಬೇಡ. ಆ ನೀಚಳನ್ನೀದಿನ ನಾನು ಶೂಲಕ್ಕೆ ಹಾಕಿಸುವೆನು," ಎಂದು ಗಜರಿದನು. ವಿಜಯನು ತಂದೆಯ ಪಾದಗಳನ್ನು ಹಿಡಿದು "ಜನಕಾ! ಇದು ಏನೋ ವಿಚಿತ್ರ ವಿಷಯವಾಗಿರುವುದು. ಆಕೆ ಅಂತಹ ದುಶ್ಶೀಲೆಯೆಂದು ನಿನಗೆ ಅಷ್ಟು ನಂಬುಗೆ ಇರುವುದಾದರೆ ಆಕೆಯು ಈ ವಿಚಾರವಾಗಿ ಏನು ಹೇಳುವಳೆಂಬುದನ್ನು ವಿಚಾರಿಸಿ ತಿಳಿದು, ಅನಂತರ ನಿನ್ನ ಇಷ್ಟಾನುಸಾರ ನಡೆಯಿಸಬಹುದು. ಅಪರಾಧಿನಿಯ ಮುಖದಿಂದ ಯಾವ ವಿಚಾರವನ್ನೂ ತಿಳಿಯದೆ ಹೀಗೆ ಮರಣದಂಡನೆಯನ್ನು ವಿಧಿಸುವುದು ನಿನ್ನಂತಹ ಸತ್ಯ ಪ್ರಭುವಿಗೆ ತಕ್ಕುದೇ ಎಂಬುದನ್ನು ದಯೆಯಿಟ್ಟು ಶಾಂತವಾಗಿ ಆಲೋಚಿಸಬೇಕು," ಎಂದು ಕೈಮುಗಿದು ಬೇಡಿಕೊಂಡನು. ಅದಕ್ಕೆ ಆತನು "ಎಲವೋ! ಆ ಅಯೋಗ್ಯಳ ಮುಖವನ್ನೇ ನಾನು ನೋಡಲಾರೆನು. ಇನ್ನು ಅವಳ ಮುಖದಿಂದ ಕೇಳಬೇಕಾದ ವಿಚಾರವೇನು ತಾನೇ ಇರುವುದು? ಆದರೂ ನೀನು ಬಹಳವಾಗಿ ಪ್ರಾರ್ಥಿಸುವೆಯಾದುದರಿಂದ ಈ ದಿನ ಏರ್ಪಡಿಸಿರುವ ಶರವಿದ್ಯಾಪರೀಕ್ಷೆಯಲ್ಲಿ ನೀನು ಗೆಲ್ಲುವುದಾದರೆ ನಿನ್ನ ಇಷ್ಟದಂತೆ ಅವಳಿಗೆ ತನ್ನ ವಿಚಾರವಾಗಿ ನನ್ನೊಡನೆ ಮಾತನಾಡಲು ಅವಕಾಶ ಕೊಡುವೆನು," ಎಂದನು. ಸದ್ಯಕ್ಕೆ ಇಷ್ಟು ಮಟ್ಟಿಗೆ ಆದುದೇ ಪುಣ್ಯಾವಶವೆಂದು ತಿಳಿದು ವಿಜಯನು ಆಗಬಹುದೆಂದು ಒಪ್ಪಿ ತಂದೆಗೆ ವಂದಿಸಿ ಹೊರಟನು.

ಇತ್ತಲಾ ಸೌದಾಮಿನಿ ಕಾದಂಬಿನಿಯರು, ಸವತಿಗೆ ತಕ್ಕ ಶಿಕ್ಷೆಯನ್ನು ಮಾಡಿಸಲು ತಾವು ಮಾಡಿದ ಉಪಾಯವು ಫಲಿಸಿತೆಂದು ನಲಿಯುತ್ತಿದ್ದರು. ಇವರ ಮಕ್ಕಳಾದ ಭಾನುತೇಜನೂ ರಾಜಹಂಸನೂ ಸಹ ರತ್ನಬಾಣವನ್ನು ವಿಜಯನ ಬತ್ತಳಿಕೆಯಲ್ಲಿಟ್ಟಿದ್ದುದರಿಂದ ಅವನನ್ನು ರಾಜನು ಕಳ್ಳನೆಂದು ಕ್ರೂರಶಿಕ್ಷೆಗೆ ಗುರಿಮಾಡುವನೆಂತಲೂ ರತ್ನಬಾಣವೂ, ರಾಜ್ಯಾಧಿಪತ್ಯವೂ, ರಮಣೀರತ್ನವೂ, ತಮ್ಮ ವಶವೇ ಆಗುವುವೆಂತಲೂ ಹಿಗ್ಗಿ ಆನಂದಪಡುತ್ತ, ಅಸ್ತ್ರವಿದ್ಯಾ ಪರೀಕ್ಷೆಗೆ ನಿಯಮಿತವಾಗಿದ್ದ ಕಾಲವನ್ನೇ ಅತಿಕುತೂಹಲದಿಂದ ಎದುರು ನೋಡುತ್ತಿದ್ದರು.

ಮೊದಲೇ ನಿಶ್ಚಿತವಾಗಿದ್ದಂತೆ ಮಧ್ಯಾಹ್ನವಾದ ಮೇಲೆ ಮೂರು ಘಂಟೆಯ ಸಮಯಕ್ಕೆ ಸರಿಯಾಗಿ ರಾಜನು, ಅರಮನೆಯ ಹಿಂದಣ ಉದ್ಯಾನದಲ್ಲಿ ಏರ್ಪಡಿಸಿದ್ದ ಲತಾಮಂಟಪ ಪ್ರದೇಶಕ್ಕೆ ಮಂತ್ರಿಪರಿವಾರ ಸಹಿತನಾಗಿ ಬಂದು ರತ್ನಾಸನದಲ್ಲಿ ಮಂಡಿಸಿದನು. ರಾಜನ ಬಲಗಡೆಯ ಭದ್ರಾಸನದಲ್ಲಿ ಮಂತ್ರಿವರ್ಯನಾದ ಧುರಂಧರನು ಕುಳಿತನು. ಮೂರು ಮಂದಿ ರಾಜಪುತ್ರರೂ ತಮ್ಮ ತಮ್ಮ ಧನುಸ್ಸುಗಳನ್ನೂ ಬತ್ತಳಿಕೆಗಳನ್ನೂ ತಂದು ಪರೀಕ್ಷೆಗೆ ಸಿದ್ಧರಾದರು. ರಾಜನು, ಮುಂದೆ ಕಾಣುತ್ತಿದ್ದ ಒಂದು ಎತ್ತರವಾದ ಹಲಸಿನಮರದ ಮೇಲ್ಗಡೆಯ ಕೊಂಬೆಯಲ್ಲಿದ್ದ ಒಂದು ಎಲೆಗೆ ಕರಿಯ ಚುಕ್ಕೆಯ ಗುರುತನ್ನು ಇಡಿಸಿ, ಆ ಎಲೆಯನ್ನು ಒಂದೇ ಬಾಣದಿಂದ ಯಾವನು ಹೊಡೆದು ಉದರಿಸುವನೋ ಅವನಿಗೆ ರತ್ನಬಾಣವನ್ನು ಕೊಡುವೆನೆಂದು ತಿಳಿಸಿದನು. ಆಗಬಹುದೆಂದು ಒಪ್ಪಿ, ಮೊದಲು ರಾಜಹಂಸನು ಬಾಣಪ್ರಯೋಗಮಾಡಿದನು. ಆದರೇನು ? ಗುರಿಯು ತಪ್ಪಿ ಬಾಣವು ವ್ಯರ್ಥವಾಯಿತು. ಅವನು ಜೋಲುಮುಖವನ್ನು ಹಾಕಿಕೊಂಡು ಹಿಂದಿರುಗಿದನು. ಭಾನುತೇಜನೂ ಅಟ್ಟಹಾಸದಿಂದ ಮುಂದೆ ಬಂದು ಧನುಷ್ಟಂಕಾರ ಮಾಡಿ ಬಿಲ್ಲಿಗೆ ಬಾಣವನ್ನು ಹೂಡಿ ಗುರಿನೋಡಿ ಹೊಡೆದನು. ಆದರೂ ಬಾಣವು ಗುರಿಯ ಸಮೀಪಕ್ಕೆ ಸಹ

ಹೋಗದೆ ಬೇರೆ ಎಲೆಗಳು ಉದುರಿದವು. ತಮ್ಮ ಸಂತೆಯೇ ಇವನ ಮುಖವೂ ಕಳೆಗುಂದಿತು. ಅಸೂಯಾಪರರೂ, ದುಷ್ಟರೂ ಆದ ಭಾನು ತೇಜ ರಾಜಹಂಸರ ಡಂಭವು ಅಡಗಿತು. ತೇಜವು ಕುಂದಿತು. ಆಸೆಯು ವ್ಯರ್ಥವಾಯಿತು.

ಇಷ್ಟು ಹೊತ್ತಿಗೆ ರತ್ನಬಾಣವನ್ನೆಲ್ಲಿದ್ದರೂ ಕಂಡುಹಿಡಿದು ಅಪ ಹರಿಸಬೇಕೆಂದು ಮಾಯಾ ಗೃಧ್ರವೇಷಧಾರಿಯಾಗಿ ಅಗ್ನಿಶಿಖ ರಾಕ್ಷ ಸನು ನಾನಾ ಪ್ರದೇಶಗಳನ್ನು ಸಂಚರಿಸಿ ವೇದವತೀ ನಗರದ ಮೇಲೆ ಹಾರಾಡುತ್ತ ಇದ್ದನು.

ತಮ್ಮಂದಿರಿಬ್ಬರೂ ಸೋತನಂತರ, ವಿಜಯನು ಮುಂದೆ ಬಂದು ತಂದೆಯ ಪಾದಗಳಿಗೆ ನಮಸ್ಕರಿಸಿ ಧನುಷ್ಟಂಕಾರ ಮಾಡಿ ಬತ್ತಳಿಕೆಯಿಂದ ಬಾಣವನ್ನೆಳೆದು ಗುರಿಗೆ ಹೊಡೆದನು. ಆ ಕ್ಷಣವೇ ರಾಜನು ಕರಿಯ ಗುರುತನ್ನಿಡಿಸಿ ಗುರಿಯಾಗಿಟ್ಟಿದ್ದ ಎಲೆಯು ನೆಲಕ್ಕೆ ಉದುರಿತು. ವಿಜಯನು ಗೆದ್ದನೆಂದು ಎಲ್ಲರೂ ಕರತಾಡನಗಳನ್ನುತ್ಸಾಹದಿಂದ ಮಾಡುತ್ತಿರುವಲ್ಲಿ ವಿಜಯನ ಧನುಸ್ಸಿನಿಂದ ಹೊರಟ ಬಾಣವು ರತ್ನಮಯವಾಗಿ ಥಳಥಳಿಸು ತ್ತಿದ್ದುದನ್ನು ರಾಜನು ನೋಡಿ, ಇದು ಯಾವ ಬಾಣವೆಂದಾಶ್ಚರ್ಯ ಪಡುತ್ತಿರುವಲ್ಲಿ, ಭಾನುತೇಜ ರಾಜಹಂಸರು ತಂದೆಯ ಬಳಿಗೆ ಬಂದು "ಜನಕಾ! ಅದೋ! ಅದೋ! ವಿಜಯನು ನಿನ್ನ ರತ್ನಬಾಣವನ್ನು ಕದ್ದಿರುವನು" ಎಂದು ತೋರಿಸಿದರು. ರಾಜನು ತಾನು ರತ್ನಬಾಣವನ್ನಿ ಟ್ಟಿದ್ದ ಬತ್ತಳಿಕೆಯನ್ನು ತರಿಸಿ ನೋಡುವಲ್ಲಿ ಅದು ಬರಿಯದಾಗಿದ್ದಿತು. ಆಗ ವಿಜಯನು ಅದನ್ನು ಕದ್ದನೆಂಬುದೇ ರಾಜನ ಮನಸ್ಸಿನಲ್ಲಿ ದೃಢವಾಯಿತು. ಆ ಬಾಣವಾದರೋ ಗುರಿಯಾಗಿದ್ದ ಎಲೆಯನ್ನು ಉದುರಿಸಿದುದಲ್ಲದೆ ವಾಯುವೇಗದಿಂದ ಹೋಗಿ, ಮೇಲೆ ರತ್ನಬಾಣವನ್ನು ಕಂಡುಹಿಡಿಯಲು ಹಾರಾಡುತ್ತಿದ್ದ ಮಾಯಾಗೃಧ್ರರಾಜನ ಪಕ್ಕೆಗೆ ಚುಚ್ಚಿಕೊಂಡಿತು. ಆ ಹಕ್ಕಿಯ ಮೈಯಿಂದ ರಕ್ತದ ತೊಟ್ಟುಗಳು ನೆಲಕ್ಕೆ ಬಿದ್ದುವೇ ಹೊರತು

ಬಾಣವು ಮಾತ್ರ ಕೆಳಗೆ ಬೀಳಲೇ ಇಲ್ಲ. ಆದರೆ ಹದ್ದು ಬಾಣದೊಡನೆ ಹಾರಿಹೋದುದನ್ನು ವಿಜಯನು ಕಂಡನು. ಅದು ಎಲ್ಲಿ ಹೋಯಿತೆಂಬುದು ತಿಳಿಯಲಿಲ್ಲ. ಗೃಧ್ರರಾಜನು ಬಾಣಹತಿಯಿಂದ ನೊಂದು ಬಹಳ ಕಷ್ಟದಿಂದ ಹಾಗೆಯೇ ಹಾರಿ ರತ್ನದ್ವೀಪ ಪ್ರಾಂತಕ್ಕೆ ಬಂದು ಸೇರಿ ತನ್ನ ನಿಜರೂಪವನ್ನು ಪಡೆದನು. ಚುಚ್ಚಿಕೊಂಡಿದ್ದ ಬಾಣವನ್ನು ಮಾತ್ರ ಶರೀರದಿಂದ ಕೀಳಲು ಸಾಧ್ಯವಾಗಲಿಲ್ಲ. ಆದಕಾರಣ ಹಾಗೆಯೇ ಬಲು ನೋವಿನಿಂದ ನರಳುತ್ತ ಅಗ್ನಿಶಿಖನು ಹಾಸುಗೆ ಹತ್ತಿ ಮಲಗಿದನು.

ಇತ್ತ, ಆ ಚಂದ್ರಸೇನರಾಜನು, ತಾನು ಕಷ್ಟಪಟ್ಟು ತಪಸ್ಸಿನಿಂದ ಶಂಕರನನ್ನು ಮೆಚ್ಚಿಸಿ ಪಡೆದ ಅಮೋಘವಾದ ರತ್ನಬಾಣವನ್ನು ವಿಜಯನು ಕದ್ದುದೂ ಅಲ್ಲದೆ, ಅದನ್ನು ಯಾರಿಗೂ ಇಲ್ಲದಂತೆ ಕಳೆದುಬಿಟ್ಟನೆಂದು ಅವನ ಮೇಲೆ ಕಿಡಿಕಿಡಿಯಾಗಿ ಕೆರಳಿದನು. ಆಗ ವಿಜಯನು ಕೋಪಗೊಳ್ಳದೆ ವಿನಯದಿಂದ ತಂದೆಗೆ ಕೈಮುಗಿದು, "ಅಪ್ಪಾ! ನಿಜಾಂಶವನ್ನು ದಯವಿಟ್ಟು ಲಾಲಿಸಬೇಕು. ರತ್ನಬಾಣವನ್ನು ನಾನು ಕದ್ದವನಲ್ಲ. ಅದು ನನ್ನ ಬತ್ತಳಿಕೆಗೆ ಹೇಗೆ ಬಂದು ಸೇರಿತೆಂಬುದೂ ನನಗೆ ತಿಳಿಯದು. ಅದು ಹೇಗಾದರೂ ಇರಲಿ. ರತ್ನಬಾಣವನ್ನು ತಂದು ನಿನ್ನ ಸನ್ನಿಧಿಗೆ ಅರ್ಪಿಸುವ ಭಾರವು ನನ್ನದಾಗಿರುವುದು. ಆದರೆ ಈಗ ಪರೀಕ್ಷೆಯಲ್ಲಿ ನಾನೇ ಜಯಶಾಲಿಯಾಗಿರುವುದರಿಂದ ನಿನ್ನ ವಾಗ್ದಾನದಂತೆ ನಮ್ಮ ತಾಯಿಯನ್ನು ಸರಿಯಾದ ವಿಚಾರಣೆಯಿಲ್ಲದೆ ಶಿಕ್ಷಿಸಲಾಗದೆಂದು ಮತ್ತೆ ಬೇಡಿಕೊಳ್ಳುತ್ತೇನೆ" ಎಂದನು. ಅದಕ್ಕೆ ರಾಜನು "ಎಲೈ! ನೀನು ಪರೀಕ್ಷೆಯಲ್ಲಿ ಗೆದ್ದಿರುವುದರಿಂದ ನಾನು ನನ್ನ ವಾಗ್ದಾನವನ್ನೇನೋ ನಡೆಯಿಸಿಕೊಡುವೆನು. ಆದರೆ ಆ ಅಮೋಘವಾದ ಬಾಣವನ್ನು ನೀನು ನನಗೆ ಕ್ಷಿಪ್ರದಲ್ಲಿ ತಂದೊಪ್ಪಿಸಬೇಕು. ಇಲ್ಲವಾದರೆ ನಿನ್ನನ್ನೂ, ನಿನ್ನ ತಾಯಿಯನ್ನೂ ಇಬ್ಬರನ್ನೂ ಹಿಡಿದು ಶಿರಶ್ಛೇದನ ಮಾಡಿಸುವೆನು" ಎಂದನು. ಅದಕ್ಕೆ ವಿಜಯನು "ಅಪ್ಪಾ! ಈ ದಿನ ಶುಕ್ಲಪಕ್ಷದ ಪಾಡ್ಯಮಿಯು. ಬರುವ ಪೂರ್ಣಿಮೆಯವರೆಗೂ ನನಗವಧಿಯನ್ನು ಕೊಡು.

ಅಷ್ಟರೊಳಗಾಗಿ ನಾನು ನಿನ್ನ ರತ್ನಬಾಣವೆಲ್ಲಿದ್ದರೂ ಹುಡುಕಿ ತಂದೊಪ್ಪಿಸುವೆನು. ಅವರೆಗೂ ನನ್ನ ತಾಯಿಯ ಪ್ರಾಣವನ್ನು ಮಾತ್ರ ಕಾಪಾಡಿರಬೇಕು. ಅವಧಿಯಲ್ಲಿ ನಾನು ಜಯಶಾಲಿಯಾಗಿ ಬಾರದಿದ್ದರೆ ನನ್ನ ತಾಯಿಯ ವಿಷಯದಲ್ಲಿಯೂ, ನನ್ನ ವಿಚಾರದಲ್ಲಿಯೂ ನಿನ್ನ ಚಿತ್ತಾನುಸಾರ ನಡೆಯಿಸಬಹುದು'' ಎಂದನು. ಅದಕ್ಕೆ ಧುರಂಧರನು, ಈ ಆಲೋಚನೆಯು ಸಮಂಜಸವಾಗಿರುವುದೆಂದು ರಾಜನೊಡನೆ ಹೇಳಿ, ಇದಕ್ಕೆ ಒಪ್ಪುವುದುಚಿತವೆಂದನು. ಅದರಂತೆ ರಾಜನು ಒಪ್ಪಿ ಹದಿನಾಲ್ಕು ದಿನಗಳ ಅವಧಿಯನ್ನು ಕೊಟ್ಟು ವಿಜಯನನ್ನು ಪ್ರಯಾಣಮಾಡಿಸಿ ಶೀಲವತಿಯನ್ನು ಪುನಃ ತನ್ನಾಜ್ಞೆಯಾಗುವವರೆಗೂ ಕಾರಾಗೃಹದಲ್ಲಿ ಎಚ್ಚರಿಕೆಯಿಂದ ನೋಡಿಕೊಳ್ಳುತ್ತಿರಬೇಕೆಂದು ಆಜ್ಞೆಮಾಡಿದನು. ಇದನ್ನರಿತು ಸೌದಾಮಿನಿ ಕಾದಂಬಿನಿಯರು ಶೀಲವತಿಯ ಜೀವಿತದ ಅವಧಿಯು ಹದಿನಾಲ್ಕು ದಿನಗಳು ಹೆಚ್ಚಿದುದಕ್ಕಾಗಿ ಮನಸ್ಸಿನಲ್ಲಿ ಖೇದಗೊಂಡರು. ಆದರೆ ರತ್ನಬಾಣವನ್ನು ಹುಡುಕಿಕೊಂಡು ಹೋದ ವಿಜಯನು ಜಯಶಾಲಿಯಾಗಿ ಶರವನ್ನು ತರುವುದು ಅಸಂಭವವೆಂದು ಇವರು ಮನಸ್ಸಿನಲ್ಲಿ ಸ್ಥಿರಮಾಡಿಕೊಂಡು ತಮ್ಮ ಮಕ್ಕಳಲ್ಲಿ ಯಾರಾದರೂ ಒಬ್ಬನಿಗೆ ರಾಜ್ಯಾಧಿಪತ್ಯವೂ, ಮತ್ತೊಬ್ಬನಿಗೆ ವಿದ್ಯಾಧರಿಯ ಪಾಣಿಗ್ರಹಣವೂ ಆಗುವಂತೆ ಸಂಧಾನಮಾಡಬೇಕೆಂತಲೂ, ಹಾಗೆ ಕ್ಷಿಪ್ರದಲ್ಲಿ ಏರ್ಪಡಿಸಿ ನಡೆಯಿಸಿದರೆ, ಅನಂತರ ವಿಜಯನು ಬಂದರೂ ಅವನಿಗೆ ಯಾವ ಪ್ರಯೋಜನವೂ ಆಗದೆ ತಮ್ಮ ಇಷ್ಟಾರ್ಥವೇ ಫಲಿಸುವುದೆಂತಲೂ ನಿಶ್ಚಯಿಸಿಕೊಂಡರು. ರಾಜನಿಗೂ ಸಹ ವಿಜಯನು ರತ್ನಶರವನ್ನು ತರುವ ವಿಷಯದಲ್ಲಿ ಸಂಪೂರ್ಣವಾದ ಸಂದೇಹವೇ ಉಂಟಾಗಿತ್ತು. ಹೇಗಾದರೂ ಅಯೋಗ್ಯಳಾದ ಶೀಲವತಿಯೂ, ಆ ದುಷ್ಟಳ ಮಗನಾದ ವಿಜಯನೂ ತನ್ನ ಎದುರಿಗಿಲ್ಲದೆ ತೊಲಗಿದರೆಂದು ಆಲೋಚಿಸಿ ತನ್ನ ವಾಗ್ದಾನದಂತೆ ಹದಿನಾಲ್ಕು ದಿನಗಳವರೆಗೂ ಶೀಲವತಿಯನ್ನು ಪ್ರಾಣದಿಂದಿಟ್ಟಿರಬೇಕಾದುದವಶ್ಯವೆಂತಲೂ, ಅವಧಿಯ ಹದಿನಾಲ್ಕು ದಿನಗಳು ಕಳೆದ ಮಾರ

ನೆಯ ದಿನವೇ ಶೀಲವತಿಯನ್ನು ತಮ್ಮ ಕುಲದೈವವಾದ ಮಹಾಕಾಳಿಗೆ ಬಲಿಯಾಗಿ ಒಪ್ಪಿಸಬೇಕೆಂತಲೂ ನಿಶ್ಚಯಿಸಿ, ರಾಜನು ಅಧಿಕಾರಿಗಳಿಗೆ ಆಜ್ಞೆಮಾಡಿದನು. ವಿದ್ಯಾಧರಿಯನ್ನು ತಮ್ಮ ಮಕ್ಕಳಲ್ಲಿ ಒಬ್ಬನಿಗೆ ತಂದು ವಿವಾಹಮಾಡಿಕೊಳ್ಳಬೇಕೆಂಬ ಕುತೂಹಲದಿಂದ ಇದ್ದ ಸೌದಾಮಿನಿ ಕಾದಂಬಿನಿಯರು, ವಿಜಯನು ವಿಜಯಶಾಲಿಯಾಗಿ ಬರುವುದು ಅಸಂಭವ ವೆಂತಲೂ, ಒಂದು ವೇಳೆ ಅವನು ಜೀವದಿಂದ ಬಂದರೂ ಆ ಕುಲಟೆಯ ಮಗನಿಗೆ ಮಂತ್ರಿಪುತ್ರಿಯಾದ ವಿದ್ಯಾಧರಿಯಂತಹ ಕನ್ಯೆಯನ್ನು ತಂದು ವಿವಾಹ ಮಾಡುವುದೂ ರಾಜ್ಯಾಧಿಪತ್ಯವನ್ನು ಕೊಡುವುದೂ ಸಮ್ಮತವಲ್ಲ ವೆಂತಲೂ, ಅದರಿಂದ ವಿದ್ಯಾಧರಿಯನ್ನು ಭಾನುತೇಜ ರಾಜಹಂಸರಲ್ಲಿ ಒಬ್ಬನಿಗೆ ವಿವಾಹಮಾಡಿ ಮತ್ತೊಬ್ಬನಿಗೆ ರಾಜ್ಯಾಧಿಪತ್ಯವನ್ನು ಕೊಡುವ ಸಂಕಲ್ಪಮಾಡಬೇಕೆಂತಲೂ, ಸಮಯವರಿತು ರಾಜನ ಮನಸ್ಸಿಗೆ ತಾಕುವಂತೆ ಆಗಾಗ ಒತ್ತಿ ಹೇಳುತ್ತ ಬಂದರು. ರಾಜನೂ ಸಹ ಇವರ ಮಾತುಗಳಿಗೆ ಸಮ್ಮನಾಗಿ ಅದರಂತೆ ಮಾಡಲು ಒಪ್ಪಿದನು.

ಮಂತ್ರಿಯಾದ ದುರಂಧರನಾದರೋ ಮೂರು ಮಂದಿ ರಾಜಪುತ್ರ ರನ್ನೂ ಬಾಲ್ಯದಿಂದಲೂ ಚೆನ್ನಾಗಿ ಬಲ್ಲವನು. ವಿಜಯನ ಗುಣ, ಗಾಂಭೀರ್ಯ, ಚಾತುರ್ಯಗಳ ವಿಷಯದಲ್ಲಿ ಆತನಿಗೆ ಹೆಚ್ಚು ಗೌರವವೂ ಪ್ರೀತಿಯೂ ಇತ್ತು. ಇದರಿಂದ ಅವನಿಗೇ ತನ್ನ ಪುತ್ರಿಯಾದ ವಿದ್ಯಾಧರಿ ಯನ್ನು ಕೊಟ್ಟು ವಿವಾಹಮಾಡಬೇಕೆಂಬ ಕುತೂಹಲವು ಆತನಿಗಿತ್ತು.

ವಿದ್ಯಾಧರಿಯಾದರೋ ವಿಜಯನಲ್ಲಿ ಬದ್ಧಾನುರಾಗೆಯಾಗಿ ಸದಾ ಅವನ ನಾಮಸ್ಮರಣೆಯಲ್ಲಿಯೇ ಕಾಲವನ್ನು ಕಳೆಯುತ್ತ, ಚಿತ್ತದಲ್ಲಿ ಅವನ ಬಿಂಬವನ್ನೇ ನೋಡುತ್ತ ವಿರಹವ್ಯಥೆಯಿಂದ ದಿನಗಳನ್ನು ಯುಗಗಳಂತೆ ನೂಕುತ್ತಿದ್ದಳು.

ಭಾನುತೇಜನೂ, ರಾಜಹಂಸನೂ ವಿಜಯನು ಹೊರಟುಹೋದುದ ರಿಂದ ಬಹಳ ಸಂತೋಷಪಟ್ಟು ಅವನು ಬರುವುದರೊಳಗಾಗಿ ಹೇಗಾದರೂ

ವಿದ್ಯಾಧರಿಯ ಮನವನ್ನು ತಮ್ಮ ಕಡೆಗೆ ತಿರುಗಿಸಿಕೊಳ್ಳಬೇಕೆಂದು ನಾನಾ ಪ್ರಯತ್ನಗಳನ್ನು ಮಾಡುತ್ತ ಬಂದರು. ವಿದ್ಯಾಧರಿಯ ಚಿತ್ತವಾದರೋ ವಿಜಯನಲ್ಲಿಯೇ ಲೀನವಾಗಿ ಹೋಗಿದ್ದುದರಿಂದ ಇವರ ಪ್ರಯತ್ನಗಳೊಂದೂ ಫಲಿಸಲಿಲ್ಲ. ಸೌದಾಮಿನಿ ಕಾದಂಬಿನಿಯರೂ ಸಹ ಇವಳಿಗೆ ನಾನಾ ರೀತಿಯಿಂದ ಬೋಧನೆಗಳನ್ನು ಮಾಡಿ ವಿಜಯನಲ್ಲಿ ದ್ವೇಷವನ್ನೂ, ಭಾನುತೇಜ ರಾಜಹಂಸರಲ್ಲಿ ಅನುರಾಗವನ್ನೂ ಹುಟ್ಟಿಸಲು ವಿಧವಿಧವಾದ ಪ್ರಯತ್ನಗಳನ್ನು ಮಾಡುತ್ತ ಬಂದರು.

---

## ಚತುರ್ಥ ತರಂಗ

---

ಇತ್ತಲಾ ವಿಜಯನು ರತ್ನಬಾಣದೊಡನೆ ಹಾರಿಹೋದ ಹದ್ದನ್ನು ಹುಡುಕಿಕೊಂಡು ಹೊರಟು, ಅದರ ಮೈಯಿಂದ ತೊಟ್ಟಿಕ್ಕಿದ್ದ ರಕ್ತದ ಗುರುತುಗಳನ್ನು ಅನುಸರಿಸಿ ಅದು ಹೋದ ಮಾರ್ಗವನ್ನು ಹಿಡಿದು ಬಹು ದೂರ ಹೋದನು. ಆದರೂ ಹದ್ದಿನ ನೆಲೆಯು ಮಾತ್ರ ತಿಳಿಯಲೇ ಇಲ್ಲ. ಹೀಗೆ ಅರಣ್ಯದಲ್ಲಿ ಬಹುದೂರ ಪ್ರಯಾಣಮಾಡಿ ಮಧ್ಯಾಹ್ನಾಯಾಸವನ್ನು ಕಳೆಯಲು ವಿಶ್ರಮಿಸಿಕೊಳ್ಳಬೇಕೆಂದು ಒಂದು ವಟವೃಕ್ಷದ ಬಳಿಗೆ ಬಂದನು. ಅಷ್ಟರಲ್ಲಿಯೇ, ಆಜಾನುಬಾಹುಗಳಾಗಿಯೂ, ಭಯಂಕರಾಕಾರರಾಗಿಯೂ ಇದ್ದ ಇಬ್ಬರು ಪುರುಷರು, ರೆಕ್ಕೆಗಳುಳ್ಳ ಒಂದು ದಿವ್ಯವಾದ ಕುದುರೆಯ ತಲೆಯನ್ನೊಬ್ಬನೂ, ಬಾಲವನ್ನೊಬ್ಬನೂ ಹಿಡಿದೆಳೆಯುತ್ತ, ಜಗಳವಾಡುತ್ತ ಸ್ವಲ್ಪ ದೂರದಲ್ಲಿ ಬರುತ್ತಿರುವುದನ್ನು ಕಂಡನು. ಈ ಸಮಯದಲ್ಲಿ ತಾನು ಇವರೊಡನೆ ಮಾತನಾಡಿ ತನ್ನ ಕಾರ್ಯಕ್ಕೆ ಸೌಕರ್ಯವನ್ನು ಕಲ್ಪಿಸಿಕೊಳ್ಳಲು ಸಾಧ್ಯವಾದೀತೇ ಎಂದಾಲೋಚಿಸುತ್ತ ಮುಂದೆ ಬೇಗನೆ ಬಂದು ಇಬ್ಬರಿಗೂ ಕೈಮುಗಿದು, "ಮಹಾಪುರುಷರಿರಾ! ನಿಮ್ಮಬ್ಬ

ರನ್ನೂ ನೋಡಿದರೆ ಅದ್ಭುತ ಸಾಹಸಿಗಳಾದ ಮಹಾನುಭಾವರಂತೆ ಕಾಣು ವಿರಿ. ನೀವುಗಳು ಈ ರೀತಿಯಾಗಿ ಈ ಕುದುರೆಯನ್ನು ಹಿಡಿದೆಳೆದಾಡುತ್ತಾ ಬರಲು ಕಾರಣವೇನು? ದಯೆಯಿಟ್ಟು ತಿಳಿಸಿದರೆ ನಿಮ್ಮ ಜಗಳವನ್ನು ಸಾಧ್ಯವಾದರೆ ನಾನು ನ್ಯಾಯವಾಗಿ ತೀರಿಸುವೆನು" ಎಂದನು. ವಿಜಯನ ಗಂಭೀರಾಕಾರದಿಂದಲೂ, ನಯವಾದ ಭಾಷಣದಿಂದಲೂ ಇವನನ್ನು ನೋಡಿದೊಡನೆಯೇ ಆ ಪುರುಷರಿಬ್ಬರಿಗೂ ಇವನಲ್ಲಿ ಪ್ರೀತಿ ಗೌರವಗಳುಂಟಾ ದುವು. ಆದರಿಂದ ಇವನ ಮಾತಿಗೆ ಸಂತೋಷದಿಂದ ಸಮ್ಮತಿಸಿ, ಅವರಲ್ಲಿ ಒಬ್ಬನು ತಮ್ಮ ಜಗಳದ ವೃತ್ತಾಂತವನ್ನು ಈ ರೀತಿಯಾಗಿ ಹೇಳಿದನು. "ಎಲೈ ಸೌಮ್ಯಾಕಾರನೇ! ನಾವು ಇಲ್ಲಿಗೆ ಹತ್ತು ಯೋಜನ ದೂರದಲ್ಲಿರುವ ಕ್ರೌಂಚ ದ್ವೀಪದಲ್ಲಿ ವಾಸಿಸುವ ಕುಂಭ ನಿಕುಂಭರೆಂಬ ರಾಕ್ಷಸರು. ನಾವಿಬ್ಬರೂ ಮಲಯಪರ್ವತ ಪ್ರಾಂತ್ಯದಲ್ಲಿ ಪರಮಶಿವನನ್ನು ಕುರಿತು ಉಗ್ರತಪಸ್ಸನ್ನಾಚರಿಸಿದೆವು. ನಮ್ಮ ತಪಸ್ಸಿಗೆ ಮೆಚ್ಚಿ ಶಂಕರನು ವಾಯು ವೇಗವುಳ್ಳ ಕಾಮಗಾಮಿಯಾದ ಈ ಅಶ್ವವನ್ನು ನಮ್ಮ ವಶಕ್ಕೆ ಕೊಟ್ಟು ಇದನ್ನು ಹತ್ತಿ ಯಾವ ಸ್ಥಳಕ್ಕೆ ಹೋಗಬೇಕೆಂದು ಬಯಸಿದರೆ ಆ ಸ್ಥಳಕ್ಕೆ ಕರೆದುಕೊಂಡು ಹೋಗುವುದು. ನಿಮ್ಮಿಬ್ಬರಲ್ಲಿ ಯಾವನು ಹೆಚ್ಚು ಬಲ ಶಾಲಿಯೋ ಅವನು ಇದನ್ನು ತೆಗೆದುಕೊಳ್ಳಬಹುದು" ಎಂದು ಹೇಳಿ ಅಂತರ್ಧಾನನಾದನು. ಇದರಿಂದ ನಾವುಗಳು ಇದನ್ನು ಈ ರೀತಿಯಾಗಿ ಹಿಡಿದುಕೊಂಡಿದ್ದೇವೆ" ಎಂದನು. ಆದಕ್ಕೆ ವಿಜಯನು ಮನಸ್ಸಿನಲ್ಲಿ ತಮ್ಮ ತಂದೆಯ ತಪಸ್ಸಿನ ಕಥೆಯನ್ನು ಸ್ಮರಿಸಿಕೊಂಡು ಲೋಕರಕ್ಷಕನಾದ ಶಂಕರನು ದುಷ್ಟಶಿಕ್ಷಣಾರ್ಥವಾಗಿ ಇಂತಹ ವರಗಳನ್ನು ಕರುಣಿಸುವ ನೆಂದಾಲೋಚಿಸಿ ಅವರನ್ನು ಕುರಿತು, "ಅಯ್ಯಾ! ಮಹಾ ತಪಸ್ವಿಗಳಾಗಿ ಮಹಾದೇವನ ಅನುಗ್ರಹಕ್ಕೆ ಪಾತ್ರರಾಗಿರುವ ನಿಮಗೆ ಅಲ್ಪನಾದ ನಾನು ಏನನ್ನು ಹೇಳುವುದಕ್ಕೂ ಶಕ್ತನಲ್ಲ. ಆದರೂ ನಾನು ಹೇಳುವಂತೆ ನೀವು ನಡೆದರೆ ನಿಮ್ಮ ಜಗಳವು ಕ್ಷಿಪ್ರದಲ್ಲಿಯೇ ಪರ್ಯವಸಾನ ಹೊಂದುವುದು.

ಹೇಗೆಂದರೆ, ನೀವಿಬ್ಬರೂ ಈ ಕುದುರೆಯನ್ನು ಇಲ್ಲಿ ನಿಲ್ಲಿಸಿ, ಇಲ್ಲಿಗೆ ಸುಮಾರು ಇನ್ನೂರು ಗಜಗಳ ದೂರದಲ್ಲಿ ಕಾಣುವ ಆ ವಟವೃಕ್ಷವನ್ನು ಮುಟ್ಟಿ ಮತ್ತೆ ಓಡಿ ಬನ್ನಿ. ಯಾರು ಮೊದಲು ಬರುವಿರೋ ಅವರೇ ಹೆಚ್ಚು ಶಕ್ತಿವಂತರೆಂದು ವ್ಯಕ್ತವಾಗುವುದರಿಂದ ಅವರೇ ಆ ಕುದುರೆಯನ್ನೇರಿ ಹೊರಟು ಹೋಗಿರಿ. ಇದರಿಂದ ನಿಮ್ಮ ಬಲವೂ ವ್ಯಕ್ತವಾದಂತಾಗುವುದು. ಸುಲಭವಾಗಿ ವ್ಯಾಜ್ಯವೂ ತೀರ್ಮಾನವಾಗುವುದು'' ಎಂದನು. ಮದಾಂಧರಾದ ರಾಕ್ಷಸರಿಬ್ಬರೂ ಆಗಬಹುದೆಂದು ಬಹಳ ಸಂತೋಷದಿಂದ ಸಮ್ಮತಿಸಿ, ಕುದುರೆಯನ್ನು ವಿಜಯನ ಬಳಿಯಲ್ಲಿ ನಿಲ್ಲಿಸಿ, ತಾವಿಬ್ಬರೂ ದೂರದಲ್ಲಿರುವ ವಟವೃಕ್ಷದ ಬಳಿಗೆ ಓಡಿಹೋದರು. ಅವರು ಹಿಂದುಮುಖನಾಗಿ ಓಡುತ್ತ ಆ ವೃಕ್ಷದಬಳಿ ಸೇರುವಷ್ಟರಲ್ಲಿ ವಿಜಯನು ಕುದುರೆಯನ್ನೇರಿ, ''ರತ್ನಬಾಣವಿರುವ ಕಡೆಗೆ ನನ್ನನ್ನು ಕರೆದುಕೊಂಡು ಹೋಗು'' ಎಂದನು. ಆ ಕ್ಷಣವೇ ಕುದುರೆಯು ಆಕಾಶಕ್ಕೇರಿ ವಾಯುವೇಗದಿಂದ ರತ್ನದ್ವೀಪದ ಮಾರ್ಗವಾಗಿ ಹೊರಟಿತು. ವಟವೃಕ್ಷದ ಬಳಿಯನ್ನು ಸೇರಿ ಕುಂಭ ನಿಕುಂಭರಿಬ್ಬರೂ ಹಿಂದಿರುಗಿ ನೋಡಿ, ಕುಂಭಗಳಂತಿದ್ದ ತಮ್ಮ ಹೊಟ್ಟೆಗಳನ್ನು ಚೆಚ್ಚಿಕೊಂಡು, ''ಅಯ್ಯಯ್ಯೋ! ದುಷ್ಟನು ಎಂತಹ ಮೋಸಮಾಡಿದನು! ಅಯ್ಯೋ! ಇಬ್ಬರ ಜಗಳವು ಮೂರನೆಯವನಿಗೆ ಲಾಭವಾಯಿತಲ್ಲಾ!'' ಎಂದು ದುಃಖಿಸುತ್ತ, ತಮ್ಮ ಅವಜ್ಞತೆಗಾಗಿ ಪಶ್ಚಾತ್ತಾಪಪಡುತ್ತ ವ್ಯಥೆಯಿಂದ ಜೋಲು ಮುಖಗಳನ್ನು ಹಾಕಿಕೊಂಡು ತಮ್ಮ ನಗರವನ್ನು ಕುರಿತು ಪ್ರಯಾಣಮಾಡಿದರು.

ವಿಜಯನು ದಿವ್ಯಾಶ್ವದ ಮೇಲೆ ವಾಯುವೇಗದಿಂದ ಪ್ರಯಾಣ ಮಾಡಿ ಸಂಧ್ಯಾಕಾಲಕ್ಕೆ ಅಗ್ನಿಶಿಖ ರಾಕ್ಷಸೇಂದ್ರನ ರಾಜಧಾನಿಯಾದ ರತ್ನಾವತಿಯ ಪ್ರಾಂತವನ್ನು ಸೇರಿ ನಗರದ ಹೊರಭಾಗದಲ್ಲಿ ಬಂದಿಳಿದನು. ಅನಂತರ ಕುದುರೆಯನ್ನು ಒಂದು ಪೊದರಿನ ಮರೆಯಲ್ಲಿ ಒಂದು ಮರಕ್ಕೆ ಕಟ್ಟಿಹಾಕಿ, ಅಲ್ಲಿಯೇ ಯಾರೂ ಕಾಣದಂತೆ ಸ್ವಲ್ಪ ಹೊತ್ತು ವಿಶ್ರಮಿಸಿ

ಕೊಂಡಿದ್ದು ಕತ್ತಲಾದ ಒಡನೆಯೆ ಮೆಲ್ಲನೆ ನಗರವನ್ನು ಪ್ರವೇಶಿಸಿ, ಅರಮನೆಯ ಮಾರ್ಗವಾಗಿ ಹೋಗುತ್ತಿದ್ದನು. ಅಷ್ಟರಲ್ಲಿಯೇ ಪದ್ಧತಿಯಂತೆ ಅರಮನೆಗೆ ಪುಷ್ಪಮಾಲೆಗಳನ್ನೂ, ಸುಗಂಧಲೇಪನಗಳನ್ನೂ ಅಣಿಮಾಡಿ ಕೊಂಡು ಹೋಗುತ್ತಿದ್ದ **ಸರೋಜಿನಿ** ಎಂಬ ಮಾಲೆಗಾತಿಯು ಇವನಿಗೆ ಗೋಚರಳಾದಳು. ಇವಳ ಸಹಾಯದಿಂದ ಈ ನಗರದ ವಿಚಾರಗಳನ್ನು ತಿಳಿದು ತನ್ನ ಕಾರ್ಯಸಾಧನೆಗೆ ಪ್ರಯತ್ನಮಾಡಬೇಕೆಂದುದ್ದೇಶಿಸಿ ವಿಜಯನು ಆಕೆಯ ಬಳಿಗೆ ಬಂದನು. ದಿವ್ಯವಸ್ತ್ರಾಭರಣ ಭೂಷಿತನಾಗಿ ನವಮನ್ಮಥನಂತೆ ಪ್ರಕಾಶಿಸುತ್ತಿದ್ದ ಇವನನ್ನು ನೋಡಿ ಸರೋಜಿನಿಯು ಆಶ್ಚರ್ಯಪರವಶಳಾಗಿ ಅವನನ್ನು ಕುರಿತು, "ಎಲೈ ಸುಕುಮಾರನೇ! ನೀನು ಯಾರು? ಹೊಸಬನಂತೆ ಕಾಣುವೆ? ನೀನು ಇಲ್ಲಿಗೆ ಬರಲೇನು ಕಾರಣ? ನೀನೇನು ಗಂಧರ್ವನೋ; ಕಿನ್ನರನೋ? ಅಥವಾ ದಿಕ್ಪಾಲಕರಲ್ಲಿ ಒಬ್ಬನೋ ಯಾರು?" ಎಂದು ಪ್ರಶ್ನೆಮಾಡಿದಳು. ಆಗ ವಿಜಯನು ಆಕೆಗೆ ನಮಸ್ಕರಿಸಿ, "ತಾಯಿಾ! ನಾನು ಗಂಧರ್ವನೂ ಅಲ್ಲ, ಕಿನ್ನರನೂ ಅಲ್ಲ. ದಿಕ್ಪಾಲಕನೂ ಅಲ್ಲ. ನಾನೊಬ್ಬ ರಾಜಪುತ್ರನು. ಬೇಟೆಯಾಡುತ್ತ ಮಾರ್ಗತಪ್ಪಿ ಇಲ್ಲಿಗೆ ಬಂದಿರುವೆನು. ನಿನ್ನನ್ನು ನೋಡಿದರೆ ಬಹಳ ದಯಾವತಿಯಂತೆ ಕಾಣುವೆ. ಆದುದರಿಂದ ನನಗೆ ಈ ನಗರದಲ್ಲಿ ನಿಲ್ಲಲು ಒಂದೆರಡು ದಿನಗಳು ಆಶ್ರಯ ವನ್ನು ಕೊಟ್ಟು, ಈ ನಗರದಲ್ಲಿನ ವಿಶೇಷಗಳನ್ನು ತಿಳಿದುಕೊಳ್ಳಲು ಅವಕಾಶ ವನ್ನುಂಟುಮಾಡಿ ಕೊಡಬೇಕಾಗಿ ಬೇಡುತ್ತೇನೆ. ಇದೋ ನಿನ್ನ ಉಪಕಾರ ಕ್ಕಾಗಿ ಮೊದಲು ಈ ರತ್ನವಲಯವನ್ನು ತೆಗೆದುಕೋ" ಎಂದು ಹೇಳಿ ತನ್ನ ಕೈಯ್ಯಲ್ಲಿದ್ದ ರತ್ನವಲಯವನ್ನು ಅವಳಿಗೆ ಕೊಟ್ಟನು. ಮಾಲೆಗಾತಿಯು ಅತ್ಯಂತ ಸಂತೋಷದಿಂದ "ಅಯ್ಯಾ! ನಿನ್ನ ವೃತ್ತಾಂತವನ್ನು ಕೇಳಿ ಸಂತೋಷವಾಯಿತು. ಈ ನಗರವು ರತ್ನದ್ವೀಪಕ್ಕೆ ರಾಜಧಾನಿಯಾದ ರತ್ನಾವತಿಯು. ಇಲ್ಲಿಗೆ ಮಹಾ ಮಾಯಾವಿಯೂ ಕಾಮರೂಪಿಯೂ ಕ್ರೂರಶಾಸನನೂ ಆದ ಅಗ್ನಿಶಿಖನೆಂಬ ರಾಕ್ಷಸೇಂದ್ರನು ರಾಜನಾಗಿರು

ವನು. ಆತನು ಅಂತರಿಕ್ಷಮಾರ್ಗದಲ್ಲಿ ಗೃಧ್ರರೂಪದಿಂದ ಬರುತ್ತಿರುವಾಗ ಯಾರೋ ಹೊಡೆದ ಒಂದು ರತ್ನಖಚಿತವಾದ ಬಾಣವು ದೇಹದಲ್ಲಿ ನಟ್ಟು ಕೊಂಡು ಕೀಳಲು ಬಾರದೆ ಇದೆ. ಈ ಬಾಧೆಯಿಂದ ಆತನು ಬಹಳವಾಗಿ ನರಳುತ್ತಿರುವನು. ವೈದ್ಯರು ಚಿಕಿತ್ಸೆ ಮಾಡುತ್ತಿರುವರು. ಆತನು ಬಹಳ ದಿನಗಳ ಹಿಂದೆ ಯಾವುದೋ ದೇಶದಿಂದ ಹೊತ್ತು ತಂದಿರುವ **ಚಂದ್ರಲೇಖೆ** ಎಂಬ ರಾಜಪುತ್ರಿಯು ಬಾಲ್ಯದಿಂದಲೂ ಆತನ ಬಳಿಯಲ್ಲಿಯೇ ಬೆಳೆದು, ಆತನನ್ನೇ ತಂದೆಯೆಂದು ಭಾವಿಸಿಕೊಂಡು ಉಪಚರಿಸುತ್ತಿರುವಳು. ಆಕೆಯ ಸೌಂದ ರ್ಯವನ್ನು ನಾನು ಇಷ್ಟೆಂದು ಬಣ್ಣಿಸಲಾರೆನು. ಆಕೆಯೊಬ್ಬಳು ಬಳಿಗೆ ಹೋದರೆ ಸೌಮ್ಯನಾಗಿ ಮಾತನಾಡುವನು. ಇತರರು ಹೋದರೆ ಬಾಧೆಯ ಕೋಪದಿಂದ ಅವರ ಮೇಲೆ ರೇಗಿರೇಗಿ ಬೀಳುವನು. ಹೀಗೆ ಮಿತಿಮೀರಿದ ಬಾಧೆಯಿಂದ ಅಗ್ನಿಶಿಖನು ನರಳುತ್ತಿರುವನು. ಆತನ ಅರಮನೆಯೂ ವೈಭವವೂ ನೀನು ನೋಡತಕ್ಕುವಾಗಿರುವುವು '' ಎಂದಳು. ರತ್ನಬಾಣವು ರಾಕ್ಷಸೇಂದ್ರನ ದೇಹದಲ್ಲಿ ನೆಟ್ಟಿರುವುದೆಂಬ ವಾರ್ತೆಯನ್ನು ತಿಳಿದೊಡನೆಯೇ ಬಹಳ ಸಂತೋಷಪಟ್ಟು ವಿಜಯನು ಹೇಗಾದರೂ ತನ್ನ ಕಾರ್ಯವನ್ನು ಸಾಧಿಸಿಕೊಂಡೇ ಹೋಗಬೇಕೆಂದು ಮನಸ್ಸಿನಲ್ಲಿ ನಿರ್ಧರಿಸಿಕೊಂಡು ಮಾಲೆ ಗಾತಿಯನ್ನು ನೋಡಿ, '' ತಾಯಿ! ನಿನ್ನಿಂದ ಈ ವಿಚಾರಗಳನ್ನು ತಿಳಿದು ಬಹಳ ಸಂತೋಷವಾಯಿತು. ನೀನು ಯಾರು ? ನಿನ್ನ ವೃತ್ತಾಂತವೇನು ? ದಯೆಯಿಟ್ಟು ತಿಳಿಸಬೇಕು '' ಎಂದು ಕೇಳಲು ಆಕೆಯು '' ಅಯ್ಯಾ ! ನಾನು ಅರಮನೆಗೆ ಸುಗಂಧದ್ರವ್ಯಗಳನ್ನೂ ಪುಷ್ಪಮಾಲಿಕೆಗಳನ್ನೂ ಒದಗಿಸಿ ಕೊಡುವ ಸೈರಂಧ್ರಿಯು. ಪದ್ಧತಿಯಂತೆ ಈ ದಿನ ರಾಜಪುತ್ರಿಗಾಗಿ ಮಾಲೆಗಳನ್ನೂ, ಅನುಲೇಪನಗಳನ್ನೂ ತೆಗೆದುಕೊಂಡು ಹೋಗುತ್ತಿರುವೆನು ''. ಎಂದಳು. ಅದಕ್ಕೆ ವಿಜಯನು, '' ತಾಯಿ! ನೀನು ನನಗೆ ದೊರೆತುದು ಮಹಾನಿಧಿಯು ದೊರೆತಂತಾಯಿತು. ಹಾಗೆಯೇ ಅರಮನೆಯಲ್ಲಿ ನನಗೆ ಯಾರನ್ನಾದರೂ ಪರಿಚಯಮಾಡಿಸುವುದರಲ್ಲಿ ಆಕ್ಷೇಪಣೆಯುಂಟೇ ? ''

ಎಂದನು. ಅದಕ್ಕೆ ಆ ಸೈರಂಧ್ರಿಯು, "ರಾಜಕುಮಾರಾ ! ನಿನ್ನಂತಹ ರಾಜಪುತ್ರನ ಪರಿಚಯವನ್ನು ಅರಮನೆಯ ಜನರಿಗೆ ಮಾಡಿಸುವುದರಲ್ಲಿ ಆತಂಕವೇನು ? ನಾಳಿನದಿನ ಪ್ರಯತ್ನಿಸಿ ನೋಡುವೆನು. ಈಗ ಬಾ ನಮ್ಮ ಮನೆಗೆ ಹೋಗೋಣ" ಎಂದು ಹೇಳಿ ಅವನನ್ನು ಕರೆದುಕೊಂಡು ತನ್ನ ಮನೆಗೆ ಹಿಂದಿರುಗಿ ಬಂದು ಆತನಿಗೆ ವಿಶ್ರಮಿಸಿಕೊಳ್ಳುವಂತೆ ಹೇಳಿ ತಾನು ಅರಮನೆಗೆ ಹೋದಳು.

ಮಾಲೆಗಾತಿಯು ಕಾಲಕ್ಕೆ ಬರಲಿಲ್ಲವೆಂದು ಅರಮನೆಯಲ್ಲಿ ರಾಜಪುತ್ರಿಯು ನಿರೀಕ್ಷಿಸಿಕೊಂಡಿರುವ ಸಮಯಕ್ಕೆ ಸರೋಜಿನಿಯು ಗಂಧಪುಷ್ಪಾದಿಗಳೊಡನೆ ಅಂತಃಪುರವನ್ನು ತಲಪಿದಳು. ಆಗ ರಾಜಪುತ್ರಿಯು ಈ ದಿನ ವಿಳಂಬವಾದುದಕ್ಕೆ ಕಾರಣವೇನೆಂದು ಕೇಳಲು, ಸರೋಜಿನಿಯು ವೇದವತೀ ನಗರದ ರಾಜಕುಮಾರನು ಮಾರ್ಗತಪ್ಪಿ ಬಂದು ತನ್ನ ಮನೆಯಲ್ಲಿ ಇಳಿದಿರುವನೆಂತಲೂ, ಆತನು ಮಾರ್ಗದಲ್ಲಿ ತನ್ನನ್ನು ಸಂಧಿಸಿ ಮಾತನಾಡುತ್ತಿದ್ದಕಾರಣ ತಾನು ಬರುವುದು ವಿಳಂಬವಾಯಿತೆಂತಲೂ ಆತನ ವೃತ್ತಾಂತವನ್ನು ವಿವರಿಸಿ ಹೇಳಿ, ಕ್ಷಮಿಸಬೇಕಾಗಿ ಬೇಡಿಕೊಂಡಳು. ರಾಜಕುಮಾರಿಯು ವೇದವತೀನಗರವೆಂದೊಡನೆಯೇ ಸಂತೋಷಪಟ್ಟು, "ಅಮ್ಮಾ ! ವೇದವತೀನಗರದ ರಾಜನ ತಂಗಿಯೇ ನಮ್ಮ ತಾಯಿಯೆಂತಲೂ, ನಮ್ಮ ಜನಕ ತಂದೆಯು ಅಗ್ನಿಶಿಖ ರಾಕ್ಷಸೇಂದ್ರನೊಡನೆ ಯುದ್ಧ ಮಾಡಿ ಮೃತನಾಗಲು, ನನ್ನನ್ನು ಒಬ್ಬ ದಾದಿಯ ವಶದಲ್ಲಿ ಬಿಟ್ಟು ನಮ್ಮ ತಾಯಿಯು ಅಗ್ನಿಪ್ರವೇಶಮಾಡಿದಳೆಂತಲೂ, ಆಗ ಈತನು, ಶಿಶುವಾಗಿದ್ದ ನನ್ನನ್ನು ಬಲಾತ್ಕಾರದಿಂದ ಆ ದಾದಿಯ ಕೈಯಿಂದ ಕಿತ್ತು ತೆಗೆದುಕೊಂಡು ಬಂದನೆಂತಲೂ ನಮ್ಮ ವೃದ್ಧ ಪರಿಚಾರಿಣಿಯರಲ್ಲಿ ಒಬ್ಬಳಾದ **ಶಾಂತಮತಿಯು** ಹೇಳುತ್ತಿದ್ದಳು. ನೀನು ಹೇಳುವ ರಾಜಕುಮಾರನ ವಿಷಯವನ್ನು ಕೇಳಿದರೆ ಆತನು ನಮ್ಮ ಸೋದರಮಾವನ ಮಗನೆಂದು ತೋರುವುದು. ಹೇಗಾದರೂ ನೀನು ನನಗೆ ಆತನ ದರ್ಶನವನ್ನು ಮಾಡಿಸಬೇಕು" ಎಂದು

ಬಹಳವಾಗಿ ಬೇಡಿಕೊಂಡಳು. ಸರೋಜಿನಿಯು ಸಂತೋಷಪಟ್ಟು, "ನೀನು ಚಿಂತಿಸಬೇಡ, ನಾಳಿನದಿನ ಸಂಧ್ಯಾಕಾಲಕ್ಕೆ ನೀನು ಉದ್ಯಾನದಲ್ಲಿರುವೆಯಷ್ಟೆ! ಅಲ್ಲಿಗೆ ನಾನು ಆತನನ್ನು ಕರೆತರುವೆನು" ಎಂದಳು. ಆಗ ರಾಜಪುತ್ರಿಯು ದೈವಾನುಗ್ರಹದಿಂದ ತನಗೆ ಬಂಧವಿಮೋಚನೆಯ ಕಾಲವು ಸಮಾಪಿಸಿತೆಂದಾಲೋಚಿಸಿ ಆ ವಾರ್ತೆಯನ್ನು ಹೇಳಿದ ಸೈರಂಧ್ರಿಗೆ ಪಾರಿತೋಷಿಕವನ್ನು ಕೊಟ್ಟು ಕಳುಹಿಸಿದಳು.

ಸರೋಜಿನಿಯು ಮನೆಗೆ ಬಂದು ಅರಮನೆಯಲ್ಲಿ ನಡೆದ ವೃತ್ತಾಂತವೆಲ್ಲವನ್ನೂ ವಿಜಯನಿಗೆ ತಿಳಿಸಿ, "ನಾಳಿನದಿನ ಸಂಧ್ಯಾಕಾಲದಲ್ಲಿ ನೀನು ರಾಜಪುತ್ರಿಯಾದ ಚಂದ್ರಲೇಖೆಯನ್ನು ಕಾಣಬೇಕು" ಎಂದು ಹೇಳಿದಳು. ಅದನ್ನು ಕೇಳಿದೊಡನೆಯೇ ವಿಜಯನು ಪರಮಾನಂದಭರಿತನಾಗಿ ಆ ರಾತ್ರಿಯನ್ನು ಕುತೂಹಲದಿಂದ ತನ್ನ ವಿಜಯಾಲೋಚನೆಗಳಿಂದಲೇ ಕಳೆದನು.

---

## ಪಂಚಮ ತರಂಗ

---

ಪಕ್ಕೆಯಲ್ಲಿ ಚುಚ್ಚಿಕೊಂಡಿದ್ದ ರತ್ನಬಾಣವನ್ನು ತೆಗೆಯಲು ಬಾರದೆ ಬಹಳವಾದ ನೋವಿನಿಂದ ಹಾಸುಗೆ ಹತ್ತಿ ಮಲಗಿದ್ದ ಅಗ್ನಿಶಿಖ ರಾಕ್ಷಸೇಂದ್ರನಿಗೆ ಅರಮನೆಯ ವೈದ್ಯನಾದ ಚರಕಾಚಾರ್ಯನು ಚಿಕಿತ್ಸೆಮಾಡುತ್ತಿದ್ದನು. ಪುತ್ರಿಯಾದ ಚಂದ್ರಲೇಖೆಯು ಯಾವಾಗಲೂ ತಂದೆಯ ಬಳಿಯಲ್ಲಿಯೇ ಉಪಚರಿಸುತ್ತ ಕುಳಿತಿರುವಳು. ಗುಣಶಾಲಿನಿಯಾದ ಚಂದ್ರಲೇಖೆಯನ್ನು ರಾಕ್ಷಸೇಂದ್ರನೂ ಬಹಳ ಪ್ರೀತಿಯಿಂದ ಕಂಡುಕೊಂಡಿದ್ದನು. ಚರಕಾಚಾರ್ಯನು, ದೇಹದಿಂದ ಬಾಣವು ಸಡಿಲಿ ಬೀಳುವಂತೆ ಔಷಧವನ್ನು ಹಾಕಿ, ನಾಳಿನದಿನ ಪ್ರಾತಃಕಾಲ ಬಾಣವನ್ನು ದೇಹದಿಂದ ಹೊರಗೆ ತೆಗೆಯುವುದಾಗಿ ಹೇಳಿದ್ದನು. ಅದರಂತೆ ರಾಕ್ಷಸೇಂದ್ರನು ಬಹಳ ನೋವಿ

ನಿಂದ ರಾತ್ರಿಯನ್ನು ಒಂದು ಯುಗದಂತೆ ಕಳೆಯುತ್ತ, ಎಂದಿಗೆ ಬೆಳಗಾದೀ ತೆಂಬ ಆತುರದಿಂದ ಸೂರ್ಯೋದಯವನ್ನು ನಿರೀಕ್ಷಿಸುತ್ತಿದ್ದನು. ಚಂದ್ರಲೇಖೆಯು ಮಾಲೆಗಾತಿಯ ಮಾತಿನಂತೆ ನೂತನ ರಾಜಕುಮಾರನ ದರ್ಶನ ಕುತೂಹಲದಿಂದ ಆ ರಾತ್ರಿಯನ್ನು ಕಳೆದಳು.

ಬೆಳಗಾಗುತ್ತ ಬಂತು. ಮನೋಹರವಾದ ತಂಗಾಳಿಯು ಮೆಲ್ಲನೆ ಸುಳಿಯಲಾರಂಭಿಸಿತು. ಪೂರ್ವದಿಕ್ಕಿನಲ್ಲಿ ಕೆಂಪು ಮೂಡಿತು. ಚಂದ್ರಲೇಖೆಯು, ಮೋಹಾಲೋಚನೆಗಳಿಂದ ರಾತ್ರಿ ನಿದ್ರೆಯಿಲ್ಲದಿದ್ದರೂ, ಪದ್ಧತಿಯಂತೆ ಉಷಃಕಾಲಕ್ಕೆ ಎದ್ದು, ಮಿಂದು ತಂದೆಯನ್ನು ಪಚರಿಸಲು ಸಿದ್ಧಳಾದಳು. ಇಷ್ಟುಹೊತ್ತಿಗೆ, ರಾಕ್ಷಸೇಂದ್ರನ ತಾಪಾಂಧಕಾರವನ್ನೂ ಚಂದ್ರಲೇಖೆಯ ವಿರಹಾಂಧಕಾರವನ್ನೂ, ವಿಜಯನ ಚಿಂತಾಂಧಕಾರವನ್ನೂ ನಿವಾರಿಸ ಲೆಂಬಂತೆ ಅರುಣಕಿರಣ ಮನೋಹರನಾದ ಸೂರ್ಯದೇವನು ಉದಯಪರ್ವತ ವನ್ನೇರಿ ತನ್ನ ತೇಜದಿಂದ ಲೋಕಾಂಧಕಾರವನ್ನು ಪರಿಹರಿಸಿ ದಿಕ್ತಟ ಗಳನ್ನು ಬೆಳಗಿದನು.

ಚರಕಾಚಾರ್ಯನು ಹಿಂದಿನ ದಿನ ಹೇಳಿದ್ದಮೇರೆಗೆ ಬಂದು, ರಾಕ್ಷಸೇಂದ್ರನ ಸ್ಥಿತಿಯನ್ನು ಪರೀಕ್ಷಿಸಿ, ತಾನು ತಂದಿದ್ದ ದ್ರಾವಕವನ್ನು, ಬಾಣವು ಚುಚ್ಚಿಕೊಂಡಿದ್ದ ಸ್ಥಳದಲ್ಲಿ ಸವರಿ, ಮೆಲ್ಲಮೆಲ್ಲನೆ ಬಾಣವನ್ನು ದೇಹದಿಂದ ಬಿಡಿಸಿ ತೆಗೆಯಲು ಪ್ರಯತ್ನಿಸಿದನು. ಆದರೂ ರಾಕ್ಷಸೇಂದ್ರನಿಗೆ ನೋವು ಮಾತ್ರ ಬಹಳವಾಗಿ, ಬಾಣವು ಹೊರಗೆ ಬರುವ ವೇಳೆಗೆ ಆತನು ಮೂರ್ಛೆಬಿದ್ದುಬಿಟ್ಟನು. ಚಂದ್ರಲೇಖೆಯು ಕಾತರಳಾಗಿ ದುಃಖಿಸತೊಡಗಿದಳು. ಆಚಾರ್ಯನು, ಆಕೆಗೆ ಬೆದರಬೇಡವೆಂದು ಧೈರ್ಯಹೇಳಿ, ಔಷಧೋಪಚಾರಗಳಿಂದಾತನನ್ನೆಬ್ಬಿಸಿ, ಗಾಯಕ್ಕೆ ಮತ್ತೆ ಔಷಧವನ್ನು ಹಾಕಿ ಕಟ್ಟಿ, ಆತನಿಗೆ ಸ್ವಲ್ಪ ಆಹಾರವನ್ನು ಕೊಡಿಸಿದನು. ಆಹಾರವನ್ನು ಸೇವಿಸಿದಮೇಲೆ ಅಗ್ನಿಶಿಖನು ಸ್ವಲ್ಪ ಚೈತನ್ಯ ಹೊಂದಿ ಗೆಲುವಾದನು. ಅನಂತರ, ತನ್ನ ಶರೀರ ದಿಂದ ತೆಗೆದಿದ್ದ, ರಕ್ತಮಯವಾದ ರತ್ನಬಾಣವನ್ನು ತೊಳೆಯಿಸಿ ತರಿಸಿ,

ಅದನ್ನು ಕೈಗೆ ತೆಗೆದುಕೊಂಡು ನೋಡುತ್ತಾ, ಈಶ್ವರದತ್ತವಾದ ರತ್ನಬಾಣವು ಕಡೆಗೆ ಹೇಗಾದರೂ ತನಗೇ ಲಭಿಸಿತಲ್ಲಾ! ಎಂದು ಸಂತೋಷಪಟ್ಟು, ಅದನ್ನು ಬಹಳ ಎಚ್ಚರಿಕೆಯಿಂದ ಪೆಟ್ಟಿಗೆಯಲ್ಲಿಟ್ಟಿರುವಂತೆ ಚಂದ್ರಲೇಖೆಯ ಕೈಯಲ್ಲಿ ಕೊಟ್ಟನು. ಆಕೆಯು ಅದರಂತೆ ಅದನ್ನು ಪೆಟ್ಟಿಗೆಯಲ್ಲಿ ಬಚ್ಚಿಟ್ಟಳು.

ಇತ್ತಲಾ ವಿಜಯನು ರಾತ್ರಿಯೆಲ್ಲವನ್ನೂ ತನ್ನ ವಿಜಯಾಲೋಚನೆಗಳಿಂದಲೇ ಕಳೆದು, ಚಂದ್ರಲೇಖೆಯ ಮುಖಚಂದ್ರದರ್ಶನ ಕುತೂಹಲದಿಂದ ತಹತಹಪಡುತ್ತ ಕ್ಷಣಗಳನ್ನೆಣಿಸುತ್ತಿದ್ದನು. ಚಂದ್ರಲೇಖೆಯೂ ಸಹ ವಿಜಯನ ಮುಖಚಂದ್ರ ದರ್ಶನಾತುರಳಾಗಿ ಚಕೋರಿಯಂತೆ ತಪಿಸುತ್ತ ಮಧ್ಯಾಹ್ನವನ್ನು ಕಳೆದು ಸಂಧ್ಯಾಸಮಯ ನಿರೀಕ್ಷಣೆಯಿಂದಿದ್ದಳು.

ಪರಜೀವನವನ್ನಪಹರಿಸುವ ಪ್ರತಾಪಶಾಲಿಯಾದ ರಾಕ್ಷಸೇಂದ್ರನ ತೇಜವೂ ಹೀಗೆಯೇ ಕ್ಷೀಣವಾಗಿ ಅವನೂ ದುಃಖಾಂಬುಧಿಗೆ ಬೀಳುವನೆಂಬಂತೆ, ಪ್ರಭಾಮಯನಾದ ಪ್ರಭಾಕರನು ಅಸ್ತಪರ್ವತದೆಡೆಯಲ್ಲಿ, ಕ್ಷೀಣತೇಜದಿಂದ ಪಶ್ಚಿಮಸಮುದ್ರದಲ್ಲಿ ಬಿದ್ದುಹೋಗುತ್ತಿದ್ದನು. ಸಂಕೇತದಂತೆ ಉದ್ಯಾನದ ಲತಾಮಂಟಪದಲ್ಲಿ, ಚಂದ್ರಲೇಖೆಯು ಸರೋಜಿನಿಯನ್ನು ರಾಜಕುಮಾರನೊಡನೆ ಎದುರುನೋಡುತ್ತ ಅತಿಕುತೂಹಲದಿಂದ ಕಾದಿದ್ದಳು. ಸ್ವಲ್ಪ ಹೊತ್ತಿನಲ್ಲಿಯೇ ಸರೋಜಿನಿಯು ಪುಷ್ಪಮಾಲಿಕಾಹಸ್ತಳಾಗಿ ವಿಜಯನೊಡನೆ ಅಲ್ಲಿಗೆ ಬಂದಳು. ಚಂದ್ರಲೇಖೆಯು, ನವಮನ್ಮಥನಂತಿದ್ದ ವಿಜಯನ ಸಂದರ್ಶನವಾದೊಡನೆಯೇ ಅವನ ಸೌಂದರ್ಯ ಸೌಭಾಗ್ಯದಿಂದ ಬೆರಗಾಗಿ ದಿಕ್ಕುತೋರದೆ ಸ್ತಬ್ಧಳಾಗಿ ನಿಂತು ಕಣ್ಣಿನಲ್ಲಿ ಆನಂದಬಾಷ್ಪಗಳನ್ನು ತಂದಳು. ವಿಜಯನು ಚಂದ್ರಲೇಖೆಯ ನಿರುಪಮಲಾವಣ್ಯ ವೈಭವದಿಂದ ಆಶ್ಚರ್ಯಾನಂದಭರಿತನಾಗಿ, ಮುಂಬರಿದು ಕೈಹಿಡಿಯಲು ಕುತೂಹಲಿಯಾದರೂ, ಧೀರೋದಾತ್ತನಾದುದರಿಂದ, ಸ್ವಭಾವವಾದ ವಿವೇಕದಿಂದಲೂ ಕರ್ತವ್ಯಲಕ್ಷ್ಯದಿಂದಲೂ ಚಿತ್ತವನ್ನು ಸ್ಥಿರಪಡಿಸಿಕೊಂಡು ನಿಂತಿರಲು, ಕಣ್ಣಿನಿಂದ ಆನಂದಾಶ್ರುಗಳು ತಾವಾಗಿಯೇ ಧಾರೆಗಳಾಗಿ ಸುರಿದವು. ಆಗ

ಆ ರಮಣಿಯು ಅರೆಬಿರಿದ ಕಮಲದಂತಿರುವ ಮುಗುಳ್ನಗೆಯಿಂದ ಮನೋಹರ ವಾದ ಚೆಂದುಟಿಗಳ ನಡುವೆ ಮುತ್ತುಗಳಂತೆ ಬೆಳಗುವ ದಂತಗಳ ಕಾಂತಿ ಗಳನ್ನು ವಿಸ್ತರಿಸಿ, ಅಂತರಂಗದ ಮೋಹಾತಿಶಯನ್ನು ಬಾಯಿಂದ ಹೇಳ ಲಾರದೆಯೂ, ಒಳಗೆ ಆಚ್ಛಾದಿಸಲಾರದೆಯೂ ಕರ್ತವ್ಯವನ್ನರಿಯದೆ, ಮುಗ್ಧತೆಯಿಂದ ನಿಂತಳು. ಚಪಲವಾದ ಮೋಹಕರ ಕಟಾಕ್ಷವೀಕ್ಷಣ ಗಳಿಂದ ಕಂಗೊಳಿಸುತ್ತ, ಮುಖಚಂದ್ರನ ಕಳೆಯಿಂದ ತನ್ನ ಹೃದಯದ ಸಂತೋಷಾಂಬುಧಿಯನ್ನು ಉಕ್ಕಿಸುತ್ತಿರುವ ಆ ರಮಣೀರತ್ನವನ್ನು ನೋಡಿ, ವಿಜಯನೂ ತಾನು ದೇವಲೋಕದ ರಂಭೆಯ ಸನ್ನಿಧಿಯಲ್ಲಿರುನೆಂಬ ಭ್ರಾಂತಿ ಯಿಂದ ಮುಗ್ಧನಾದನು.

ಮೊಳಕಾಲಿನವರೆಗೂ ದಟ್ಟವಾಗಿಯೂ ನೀಳವಾಗಿಯೂ ಬಿದ್ದಿರುವ ಆ ಸುಂದರಿಯ ಕೇಶಪಾಶಗಳ ಸೌಂದರ್ಯ ಸೌಭಾಗ್ಯವು ವಿಜಯನ ಹೃದಯವನ್ನು ಕಾಮಪಾಶಗಳಿಂದ ಕಟ್ಟಿಹಾಕಿತು. ಆಕೆಯ ದೇಹಕಾಂತಿ ಯೆಂಬ ಮಿಂಚಿನ ಬೆಳಕಿನಲ್ಲಿ ಬೆರಗಾಗಿ ನಿಂದ ಆತನ ಕಣ್ಣಿಗೆ ಆ ದಿವ್ಯಾಕೃತಿ ಯೊಂದಲ್ಲದೆ ಪ್ರಪಂಚದ ಇತರ ಯಾವ ವಸ್ತುಗಳೂ ಕಾಣದೆ ಹೋದವು. ಒಂದು ರತ್ನಬಾಣಕ್ಕಾಗಿ ಬಂದ ಆತನ ಎದೆಗೆ ಒಂದು ಕೋಟಿ ಕಾಮಬಾಣ ಗಳು ಏಕಕಾಲದಲ್ಲಿ ತಗುಲಿದವು. ಚಂದ್ರಲೇಖೆಯ ಕಣ್ಣಿಗೆ ವಿಜಯನೂ, ವಿಜಯನ ಕಣ್ಣಿಗೆ ಚಂದ್ರಲೇಖೆಯೂ ಮಾತ್ರವೇ ಕಂಡರಲ್ಲದೆ ಇನ್ನು ಉಳಿದ ಜಗತ್ತೆಲ್ಲವೂ ಅವರ ಭಾಗಕ್ಕೆ ಶೂನ್ಯವಾದಂತೆ ಇತ್ತು. ಚಂದ್ರಲೇಖೆಗೆ ಲಜ್ಜೆಯು ಅಂಕುರಿಸಿ ಬರುತ್ತಿದ್ದರೂ ಮೋಹವು ಆ ಲಜ್ಜೆಯನ್ನು ಬಡಿದು ಹಿಂದಕ್ಕೆ ತಳ್ಳಲಾರಂಭಿಸಿತು. ವಿಜಯನ ಮಿತಿಮೀರಿದ ಕುತೂಹಲವು ಅವನ ವಿವೇಕವನ್ನು ಮುಂಬರಿಯದಂತೆ ನಿರೋಧಿಸುತ್ತಿದ್ದಿತು.

ಇವರಿಬ್ಬರ ರೀತಿಯನ್ನು ನೋಡಿ ಇಂಗಿತಜ್ಞಳಾದ ಸರೋಜಿನಿಯು ಇವರಿಗೆ ರಾಕ್ಷಸರಿಂದ ಅಪಾಯವೊದಗೀತೆಂಬ ಭೀತಿಯಿಂದ ಉಭಯರಿಗೂ ಎಚ್ಚರವನ್ನು ಹೇಳಿ ಚಂದ್ರಲೇಖೆಯನ್ನು ಕುರಿತು, "ತಾಯಿ, ನಿನ್ನ

ಇಷ್ಟದಂತೆ ರಾಜಪುತ್ರನ ದರ್ಶನವನ್ನು ಮಾಡಿಸಿರುವೆನು. ಅಪ್ಪಣೆಯಾದರೆ ನಾನಿನ್ನು ಹೊರಡುವೆನು. ರಾಕ್ಷಸರಿಂದ ನಮ್ಮ ರಾಜಕುಮಾರನಿಗೆ ಅಪಾಯಬಾರದಂತೆ ನೋಡಿಕೊಳ್ಳುವ ಭಾರವು ನಿನ್ನದು" ಎಂದು ಹೇಳಿ ಹೊರಟುಹೋದಳು.

ಈವರೆಗೆ ಮೋಹಾವೇಶವು ಚಂದ್ರಲೇಖೆಯ ಲಜ್ಜೆಯನ್ನು ಪೂರ್ಣವಾಗಿ ಓಡಿಸಿಬಿಟ್ಟಿದ್ದ ಕಾರಣ ಆ ಯುವತಿಯು ಓಡಿ ಬಂದು, ವಿಜಯನ ಪಾದಗಳಮೇಲೆ ಬಿದ್ದು, "ಮೋಹನಾಂಗಾ! ನಾನು ನಿನ್ನನ್ನು ನನ್ನ ಭಾಗದ ದೈವವೂ ನನ್ನ ಅರ್ಧಪ್ರಾಣವೂ ಎಂದು ಭಾವಿಸಿ ನಿನ್ನ ದಾಸಿಯಾಗಲು ನಿರ್ಧರಿಸಿರುವೆನು. ನನ್ನನ್ನು ಕೈಬಿಡದೆ ಕಾಪಾಡುವ ಭಾರವು ನಿನ್ನದು" ಎಂದು ಹೇಳಿ ಆತನ ಎರಡು ಕೈಗಳನ್ನೂ ಹಿಡಿದು ಕಣ್ಣಿನಲ್ಲಿ ನೀರು ತಂದಳು.

ವಿಜಯನ ಮನಸ್ಸಿನಲ್ಲಿ ಮೋಹಕ್ಕೂ ವಿವೇಕಕ್ಕೂ ಬಹಳವಾಗಿ ಹೊಡೆದಾಟ ನಡೆದು ಕಡೆಗೆ ಮೋಹವೇ ಜಯ ಹೊಂದಿದ್ದ ಕಾರಣ, ಡೋಲಾಯಮಾನವಾಗಿದ್ದ ಅವನ ಮನವು ಚಂದ್ರಲೇಖೆಯ ಪ್ರಾರ್ಥನೆಗೆ ವಶವಾಗಿ ಬಿಟ್ಟಿತು. ಉಭಯರೂ ಸರಸಾಲಾಪಗಳಿಂದ ಸ್ವಲ್ಪ ಹೊತ್ತನ್ನು ಕಳೆದು ಪರಸ್ಪರ ವೃತ್ತಾಂತಗಳನ್ನು ವಿಸ್ತರಿಸಿ ತಿಳಿಸಿದರು. ವಿಜಯನ ಅಪೇಕ್ಷೆಯಂತೆ ಚಂದ್ರಲೇಖೆಯು ತಮ್ಮ ತಂದೆಯ ಬಳಿಯಲ್ಲಿರುವ ರತ್ನ ಬಾಣವನ್ನು ತಾನು ತಂದುಕೊಡುವುದಾಗಿ ಒಪ್ಪಿ, ತನ್ನನ್ನು ಕೈವಿಡಿದು ತನ್ನ ಬಂಧುಗಳ ಬಳಿಗೆ ಕರೆದುಕೊಂಡು ಹೋಗಬೇಕೆಂದು ವಿಜಯನನ್ನು ಪ್ರಾರ್ಥಿಸಿಕೊಂಡಳು. ಈ ಪ್ರಾರ್ಥನೆಯಿಂದ ವಿಜಯನಿಗೆ ವಿಜಯ ಲಕ್ಷ್ಮಿಯೂ ಭಾಗ್ಯಲಕ್ಷ್ಮಿಯೂ ಸಹ ಏಕಕಾಲದಲ್ಲಿ ಭುಜಗಳನ್ನಲಂಕರಿಸಿ ದಂತಾಯಿತು. ಇದರಿಂದ ಆತನು ಸಂತೋಷದಿಂದ ಸಮ್ಮತಿಸಿದನು.

ರಾತ್ರಿ ಮತ್ತೆ ತಂದೆಯ ಉಪಚಾರಕ್ಕಾಗಿ ಹೋಗಬೇಕಾಗಿದ್ದ ಕರ್ತವ್ಯವು ಚಂದ್ರಲೇಖೆಯನ್ನು ಆಕಡೆಗೆ ಸೆಳೆಯುತ್ತಿತ್ತು. ರಾಕ್ಷಸ ರಿಂದೇನಾದರೂ ಅಪಾಯವೊದಗಿ ತನ್ನ ಕಾರ್ಯಕ್ಕೆ ಭಂಗವುಂಟಾದೀತೆಂಬ

ಭಯವು ವಿಜಯನನ್ನು ಚಪಲಗೊಳಿಸಿತ್ತು. ಇದರಿಂದ ಇಬ್ಬರೂ ಅಲ್ಲಿಂದ ಹೊರಡಲುದ್ಯುಕ್ತರಾದರು. ಹೃದಯಗಳು ಒಂದನ್ನೊಂದು ಅಗಲದೆ ಇದ್ದುದರಿಂದ ಶರೀರಗಳು ಆ ಸ್ಥಳದಿಂದ ಚಲಿಸುವುದೇ ಕಷ್ಟವಾಯಿತು. ಕಡೆಗೆ ಬೇರೆ ಉಪಾಯವಿಲ್ಲದೆ ಇಬ್ಬರೂ ಹೊರಡಲೇ ಬೇಕಾಯಿತು. ಮಾರನೆಯ ದಿನ ತಾನು ಒಂದು ವೇಳೆ ಹೇಳಿ ಕಳುಹಿಸಿದರೆ ಅರಮನೆಗೆ ಬರಬೇಕೆಂದು ಕೇಳಿಕೊಂಡ ಚಂದ್ರಲೇಖೆಯ ಪ್ರಾರ್ಥನೆಗೆ ವಿಜಯನು ಒಪ್ಪಿ, ಅಲ್ಲಿಂದ ತನ್ನ ಶರೀರವನ್ನು ಬಲಾತ್ಕಾರವಾಗಿ ಎಳೆದುಕೊಂಡು ಸರೋಜಿನಿಯ ಮನೆಗೆ ಬಂದನು. ಚಂದ್ರಲೇಖೆಯೂ ವಿಜಯನಮೇಲೆ ನಟ್ಟದೃಷ್ಟಿಗಳನ್ನು ಕೀಳಲಾರದೆ ಬಹು ಪ್ರಯತ್ನದಿಂದ ಹೊರಟು ಅರಮನೆಗೆ ಬಂದು ತಂದೆಯ ಉಪಚಾರದಲ್ಲಿ ನಿರತಳಾದಳು.

ರಾತ್ರಿಯೆಲ್ಲವೂ ಉಭಯರಿಗೂ, ಆ ದಿನ ತಮಗೊದಗಿದ ಪರಸ್ಪರ ಸ್ನೇಹಾನಂದಗಳ ಸ್ಮರಣೆಯಿಂದಲೂ ಮುಂದಿನ ಆಲೋಚನೆಗಳಿಂದಲೂ, ನಿದ್ರೆಯೇ ಹತ್ತಲಿಲ್ಲ. ಸ್ವಲ್ಪ ಮಂಪರವೇನಾದರೂ ಹತ್ತಿದರೂ ಅದರಲ್ಲಿಯೂ ತಮ್ಮ ವಿಲಾಸ ವಿನೋದಗಳ ವಿಧವಿಧವಾದ ಸ್ವಪ್ನಗಳೇ ಕಾಣುತ್ತಿದ್ದವು.

ರಾಕ್ಷಸೇಂದ್ರನಿಗೆ ಆ ದಿನ ಗಾಯದ ನೋವು ಕಡಿಮೆಯಾಗಿ ಎಂದಿಗಿಂತಲೂ ಚೆನ್ನಾಗಿ ನಿದ್ದೆ ಹತ್ತಿತು. ಬೆಳಗಾದ ಮೇಲೆ ಎಂದಿನಂತೆ ತನ್ನನ್ನು ಉಪಚರಿಸಲು ಬಂದ ಮಗಳೊಡನೆ ಆತನು ಸಂತೋಷದಿಂದ ಮಾತನಾಡುತ್ತ, "ಮಗೂ, ನಿನ್ನ ಪ್ರೀತಿಯಿಂದ ನನಗೆ ಬಹಳ ಸಂತೋಷ ವಾಯಿತು. ನನ್ನ ಕಷ್ಟಕಾಲದಲ್ಲಿ ನನಗೆ ನೀನು ಮಾಡಿದ ಉಪಚಾರ ದಿಂದ ನಾನು ಅತ್ಯಾನಂದಭರಿತನಾಗಿದ್ದೇನೆ. ನಿನ್ನ ಇಷ್ಟಾರ್ಥವೇನು ಹೇಳು. ಅದನ್ನು ನಡೆಯಿಸಿ ಕೊಡುವೆನು" ಎಂದು ಮುದಿದಡವಿ ಕೇಳಿದನು.

ಸಮಯೋಚಿತವಾಗಿ ತಂದೆಯ ಮುಖದಿಂದ ಹೊರಟ ಈ ಪ್ರಶ್ನೆ ಯಿಂದ ಆನಂದಭರಿತಳಾದ ಚಂದ್ರಲೇಖೆಯು, ತನ್ನ ಇಷ್ಟಾರ್ಥವನ್ನು ಸಾಧಿಸಿಕೊಳ್ಳಲು ಇದೇ ಸುಸಮಯವೆಂದು ಮನಸ್ಸಿನಲ್ಲಿ ನಲಿದು, ರಾಕ್ಷ

ಸೇಂದ್ರನನ್ನು ನೋಡಿ ವಿನಯದಿಂದ, "ತಂದೆಯೇ, ನೀನು ನನ್ನಲ್ಲಿಟ್ಟಿರುವ ಪ್ರೀತಿಗಾಗಿ ನಾನು ನಿನಗೆ ಎಷ್ಟು ಸೇವೆಯನ್ನು ಮಾಡಿದರೆ ತಾನೆ ಸಾಕಾದೀತು! ನನ್ನ ಕರ್ತವ್ಯದಂತೆ ನಾನು ನಿನಗೆ ಸಾಮಾನ್ಯವಾಗಿ ಉಪಚಾರ ಮಾಡಿದೆನು. ನೀನು ನನ್ನ ದೋಷಗಳನ್ನು ಎಣಿಸದೆ ನನಗೆ ಈ ರೀತಿ ಪ್ರಸನ್ನನಾಗಿ ವರಪ್ರದಾನ ಮಾಡಿದುದರಿಂದ ಬಹಳ ಸಂತೋಷ ವಾಯಿತು. ಆದರೆ...." ಎಂದು ಅರ್ಧೋಕ್ತಿಯಲ್ಲಿ ಸುಮ್ಮನಾಗಿ ಲಜ್ಜೆ ಯಿಂದ ತಲೆಯನ್ನು ತಗ್ಗಿಸಿ, ನೆಲವನ್ನು ಉಂಗುಟದಿಂದ ಬರೆಯುತ್ತ ನಿಂತಳು. ಆ ಮುದ್ದುಮೋಹನೆಯು ನಿಂತಿದ್ದ ಅಂದವನ್ನೂ ಅವಳಿಗೆ ತನ್ನಲ್ಲಿರುವ ಗೌರವ ಲಜ್ಜಾಭಾವಗಳನ್ನೂ ಸಹ ನೋಡಿ ದಾನವೇಂದ್ರ ನಿಗೆ ಮತ್ತಷ್ಟು ಪ್ರೀತಿಯು ಉಕ್ಕಿ, "ಮಗೂ, ಸಂದೇಹವೇಕೆ? ನಿನ್ನ ಇಷ್ಟಾರ್ಥವೇನಿದ್ದರೂ ಸಂಕೋಚವಿಲ್ಲದೆ ಹೇಳು. ನಾನು ನಿಸ್ಸಂದೇಹ ವಾಗಿ ನಡೆಯಿಸಿಕೊಡುವೆನು. ತಂದೆಯಾದ ನನ್ನಲ್ಲಿಯೂ ನೀನು ಲಜ್ಜೆ ಪಡಬೇಕೇ? ಸಾಕು; ಮಾತನಾಡು" ಎಂದನು. ಅದಕ್ಕೆ ಆ ರಮ ಣಿಯು "ಅಪ್ಪಾ, ಮತ್ತೇನೂ ಇಲ್ಲವು. ಎಲ್ಲ ಹೆಣ್ಣು ಮಕ್ಕಳೂ ಯಾವ ಇಷ್ಟಾರ್ಥವನ್ನು ತಂದೆಗಳಲ್ಲಿ ಹೇಳಲು ನಾಚುವರೋ ಅದನ್ನು ನೀನು ಬಲ್ಲವನಾಗಿಯೇ ಇರುವೆ. ಆ ವಿಷಯದಲ್ಲಿ ನೀನು ಮೊದಲೇ ಆಲೋಚಿ ಸುತ್ತಿರುವೆಯಷ್ಟೆ!" ಎಂದಳು. ಅದಕ್ಕೆ ರಾಕ್ಷಸೇಂದ್ರನು, "ಮಗೂ, ತಿಳಿಯಿತು, ನಿನ್ನ ಭಾವವು ತಿಳಿಯಿತು. ನಿನ್ನ ವಿವಾಹ ವಿಚಾರವು ತಾನೇ! ಆಗಲಿ ಆ ವಿಷಯವಾಗಿ ನಿನ್ನ ಭಾವವೇನೆಂಬುದನ್ನು ತಿಳಿಸು, ನಡೆಯಿಸು ವೆನು; ಲಜ್ಜೆಯೇಕೆ?" ಎಂದು, ಬಳಿಯಲ್ಲಿ ನಿಂತಿದ್ದವಳನ್ನು ಕೈಹಿಡಿದು ತನ್ನ ಸಮೀಪದಲ್ಲಿ ಕುಳ್ಳಿರಿಸಿಕೊಂಡನು. ಚಂದ್ರಲೇಖೆಯ ಮನಸ್ಸಿನಲ್ಲಿ ಧೈರ್ಯ ಸಂತೋಷಗಳು ಹೆಚ್ಚುತ್ತ ಬಂದವು. ಆಗ ತಲೆಯನ್ನು ತಗ್ಗಿಸಿ "ಅಪ್ಪಾ! ನಾನು ಒಪ್ಪುವ ವರನಿಗೇ ನನ್ನನ್ನು ವಿವಾಹ ಮಾಡಿಕೊಡ ಬೇಕೆಂಬುದೇ ನನ್ನ ಪ್ರಾರ್ಥನೆಯು" ಎಂದು ಸುಮ್ಮನಾದಳು.

ಆಣಿಮುತ್ತುಗಳಂತೆ ಗಂಭೀರವಾಗಿ ಪುತ್ರಿಯ ಮುಖದಿಂದ ಹೊರಟ ನುಡಿಗಳನ್ನು ಕೇಳಿ ರಾಕ್ಷಸೇಂದ್ರನಿಗೆ ಸಂತೋಷವಾಯಿತು. ಆಗ ಮುಡಿ ದಡವಿ, "ಮಗೂ, ಇದು ಯಾವ ಪ್ರಬಲವಾದ ವಿಚಾರವೆಂದು ಇಷ್ಟು ಭಯ ಸಂಕೋಚ ದೈನ್ಯಗಳಿಂದ ಕೇಳಿಕೊಂಡೆ! ನಿನ್ನ ಇಷ್ಟದಂತೆಯೇ ಆಗಲಿ, ನೀನು ಒಪ್ಪುವ ವರನಿಗೇ ನಿನ್ನನ್ನು ಕೊಟ್ಟು ವಿವಾಹ ಮಾಡುವೆನು. ಅಂತಹ ವರನು ಯಾರಾದರೂ ನಿನ್ನ ಮನಸ್ಸಿಗೆ ಬಂದಿರುವನೇ?" ಎಂದು ಕೇಳಿದನು. ಅದಕ್ಕೆ ಸಂತೋಷದಿಂದ ಆ ಮೋಹನೆಯು, "ಅಪ್ಪಾ, ರೂಪ ದಲ್ಲಿ ಮನ್ಮಥನನ್ನು ತಿರಸ್ಕರಿಸುವ ತರುಣನೊಬ್ಬನು ಮಾರ್ಗವಶದಿಂದ ನಮ್ಮ ಅರಮನೆಯ ಕಡೆಗೆ ಬರುತ್ತಿದ್ದುದನ್ನು, ಉಪ್ಪರಿಗೆಯ ಮೇಲಿದ್ದ ನಾನು ನೋಡಿ ಅವನ ಸೌಂದರ್ಯ ಗಾಂಭೀರ್ಯಗಳಿಂದಾಶ್ಚರ್ಯಪಟ್ಟು, ದಾಸಿಯರ ಮೂಲಕ ಆತನ ವೃತ್ತಾಂತವನ್ನು ವಿಚಾರಿಸುವಲ್ಲಿ ಆತನು ದೇಶಸಂಚಾರಾರ್ಥವಾಗಿ ಬಂದಿರುವ ಯಾವನೋ ರಾಜಪುತ್ರನೆಂದು ತಿಳಿಯಿತು. ಆತನ ರೂಪಗಾಂಭೀರ್ಯಗಳನ್ನು ನೋಡಿದರೆ ಮಹಾ ತೇಜಸ್ವಿಯಾಗಿ ಕಾಣುವನು. ಅಪ್ಪಣೆಯಾದರೆ ದಾಸಿಯರ ಮೂಲಕ ಆತನನ್ನು ನಿನ್ನ ಸನ್ನಿಧಿಗೆ ಕರೆಯಿಸುವೆನು ನೋಡಬಹುದು" ಎಂದಳು.

ರಾಕ್ಷಸೇಂದ್ರನು ಆಗಬಹುದೆಂದು ತನ್ನ ಒಪ್ಪಿಗೆಯನ್ನು ಕೊಡಲು ಚಂದ್ರಲೇಖೆಯು ಸಂತೋಷದಿಂದ, ಆ ಕೂಡಲೇ ರಾಜಕುಮಾರನನ್ನು ಕರೆತರುವಂತೆ ದಾಸಿಯರಮೂಲಕ ಸರೋಜಿನಿಗೆ ಹೇಳಿ ಕಳುಹಿಸಿದಳು.

ಇತ್ತಲಾ ಸರೋಜಿನಿಯ ಮನೆಯಲ್ಲಿ, ಚಂದ್ರಲೇಖೆಯ ಲೀಲಾ ವಿಲಾಸಗಳನ್ನೇ ನೆನೆ ನೆನೆದು, ಆಕೆಯು ಯಾವಾಗ ತನಗೆ ಹೇಳಿ ಕಳುಹಿಸು ವಳೋ ಎಂಬ ಆತುರದಿಂದಿದ್ದ ವಿಜಯನಿಗೆ ದಾಸಿಯರ ಮೂಲಕ ಬಂದ ಆಹ್ವಾನದಿಂದ ಪರಮಾನಂದವುಂಟಾಯಿತು. ಆ ಕೂಡಲೇ ಸರೋಜಿ ನಿಯು ಹೇಳಿದ ಮೇರೆಗೆ, ರಾಜಯೋಗ್ಯವಾದ ಉಡುಪನ್ನು ಧರಿಸಿ ಆಕೆ ಯೊಡನೆ ಅರಮನೆಗೆ ಹೊರಟು ಬಂದನು.

ವಿಜಯನಾಗಮಸವನ್ನು ಅತಿ ಕುತೂಹಲದಿಂದ ನಿರೀಕ್ಷಿಸಿಕೊಂಡಿದ್ದ ಚಂದ್ರಲೇಖೆಯು ಆತನನ್ನು ತನ್ನ ತಂದೆ ಇರುವ ಸ್ಥಳಕ್ಕೆ ಬರಮಾಡಿದಳು. ಆತನು ಭಯಂಕರಾಕಾರನಾದ ಅಗ್ನಿಶಿಖನ ಮುಖವನ್ನು ನೋಡಿ ಬೆರಗಾದರೂ, ಸರ್ಪದ ಶಿರಸ್ಸಿನಲ್ಲಿರುವ ಜೀವರತ್ನವನ್ನು ಪಡೆಯಲಾತುರನಾದ ವೀರನು ಆ ಸರ್ಪದ ಘೋರಾಕಾರಕ್ಕೂ ಭೀಕರ ಫೂತ್ಕಾರಕ್ಕೂ ಹೆದರದೆ ಮುಂಬರಿಯುವಂತೆ, ರತ್ನಬಾಣವನ್ನೂ ಕನ್ಯಾರತ್ನವನ್ನೂ ಸಾಧಿಸುವ ಕುತೂಹಲದಿಂದಿದ್ದ ವಿಜಯನು ಲೇಶವೂ ಹಿಂದೆಗೆಯದೆ ಧೀರನಾಗಿ ಮುಂದೆ ಬಂದು ರಾಕ್ಷಸೇಂದ್ರನಿಗೆ ನಮಸ್ಕರಿಸಿದನು.

ವಿಜಯನ ಮುಖವನ್ನು ನೋಡಿದ ಕೂಡಲೆ ಅಗ್ನಿಶಿಖನಿಗೆ, ತನ್ನನ್ನು ರತ್ನಬಾಣದಿಂದ ಹೊಡೆದ ವ್ಯಕ್ತಿಯು ಬಂದು ಎದುರಿಗೆ ನಿಂತಿತು. ಏತಕ್ಕೆಂದರೆ, ಆ ರಾಕ್ಷಸೇಂದ್ರನು ಮಾಯಾ ಗೃಧ್ರರೂಪದಿಂದ ರತ್ನಬಾಣವನ್ನು ಹುಡುಕಲು ಹೋಗಿದ್ದಾಗ, ವೇದವತೀನಗರ ಪ್ರಾಂತದಲ್ಲಿ ಇದೇ ವಿಜಯನು ರತ್ನಬಾಣವನ್ನು ತನ್ನ ಕಡೆಗೆ ಹೊಡೆದುದನ್ನು ತನ್ನ ತೀಕ್ಷ್ಣ ದೃಷ್ಟಿಯಿಂದ ಆತನು ಸ್ಪಷ್ಟವಾಗಿ ನೋಡಿದ್ದನು. ಆದಕಾರಣ ಇವನೇ ತನಗೆ ಇಷ್ಟು ಅನರ್ಥವನ್ನುಂಟುಮಾಡಿದ ದ್ರೋಹಿಯೆಂದು ರಾಕ್ಷಸನ ಮನಸ್ಸಿನಲ್ಲಿ ಕ್ರೋಧಾಗ್ನಿಯು ಪ್ರಜ್ವಲಿಸಿತು. ಅನಂತರ ಅವನ ಚರಿತ್ರೆಯನ್ನು ವಿಚಾರಿಸುತ್ತಲೇ, ವಿಜಯನು ವೇದವತೀನಗರದರಸನಾದ ಚಂದ್ರಸೇನರಾಯನ ಮಗನೆಂದೂ ತಿಳಿಯಿತು. ಆ ಚಂದ್ರಸೇನನೇ ತನ್ನನ್ನು ಕೈಲಾಸಪರ್ವತ ಪ್ರಾಂತದಲ್ಲಿ ಮಲ್ಲಯುದ್ಧದಲ್ಲಿ ಸೋಲಿಸಿ ಈಶ್ವರದತ್ತವಾದ ರತ್ನಬಾಣವನ್ನು ಹೊತ್ತುಕೊಂಡು ಹೋದವನೆಂಬುದೂ ಅವನ ಮನಸ್ಸಿಗೆ ಬಂದುದರಿಂದ ಅವನ ಆಗ್ರಹವು ಇಮ್ಮಡಿಸಿತು. ಆ ಕೂಡಲೇ ವಿಜಯನನ್ನು ಶೂಲಕ್ಕೇರಿಸಬೇಕೆಂಬ ಸಂಕಲ್ಪವು ಮನಸ್ಸಿನಲ್ಲಿ ಹುಟ್ಟಿದರೂ, ಅವನು ತನ್ನ ಪುತ್ರಿಯು ಒಪ್ಪಿದ ವರನಾದುದರಿಂದ, ಅವಳಿಗೆ ತಾನು ಕೊಟ್ಟ ವಾಗ್ದಾನವನ್ನು ಆ ಕ್ಷಣವೇ ವ್ಯರ್ಥಮಾಡಿದಂತೆ ತೋರ್ಪ

ಡಿಸಿಕೊಳ್ಳಬಾರದೆಂದಾಲೋಚಿಸಿ, ಉಕ್ಕಿಬಂದ ಮಹಾ ಕ್ರೋಧವನ್ನು ಹಾಗೆಯೇ ನುಂಗಿಕೊಂಡು, ಪುತ್ರಿಯೊಡನೆ ಸಂತೋಷವನ್ನು ನಟಿಸಿ, ವಿಜಯನ ರೂಪಲಕ್ಷಣಗಳನ್ನು ಅವಳ ತೃಪ್ತಿಗಾಗಿ ಹೊಗಳಿ, ಅವರಿಬ್ಬರೂ ಪರಸ್ಪರ ಅನುರೂಪರಾದ ವಧೂವರರೆಂದು ಬೂಟಾಟಕದ ಮೆಚ್ಚಿಕೆಯನ್ನು ತೋರ್ಪಡಿಸಿ ಉಭಯರನ್ನೂ ಬೆರಗುಮಾಡಿದನು. ಚಂದ್ರಲೇಖೆಗೂ ವಿಜಯನಿಗೂ ತಾವಿಬ್ಬರೂ ಸತಿಪತಿಯರಾದಂತೆಯೇ ಸಂಪೂರ್ಣವಾದ ಭರವಸೆಯುಂಟಾಯಿತು. ರಾಕ್ಷಸೇಂದ್ರನು ತಾನು ರಾಜಕುಮಾರನ ಶಕ್ತಿ ಚಾತುರ್ಯಗಳನ್ನು ನೆಪಮಾತ್ರಕ್ಕೆ ಪರೀಕ್ಷಿಸಿ ಅನಂತರ ಕನ್ಯೆಯನ್ನು ಕೊಟ್ಟು ವಿವಾಹ ಮಾಡುವುದಾಗಿ ಹೇಳಿ, ಮಧ್ಯಾಹ್ನದ ಮೇಲೆ ವರಪರೀಕ್ಷೆಯನ್ನೇರ್ಪಡಿಸಿದನು.

ರಾಕ್ಷಸೇಂದ್ರನ ಮಾಯಾಮಂತ್ರ ತಂತ್ರಕೃತ್ರಿಮಾದಿಗಳೆಲ್ಲವನ್ನೂ ಚೆನ್ನಾಗಿ ತಿಳಿದಿದ್ದ ಚಂದ್ರಲೇಖೆಯು, ಪರೀಕ್ಷೆಯಲ್ಲಿ ಒಂದು ವೇಳೆ ತನ್ನ ಮನೋವಲ್ಲಭನು ಸೋತು ವಿಫಲನಾದಾನೆಂಬ ಸಂದೇಹದಿಂದ, ವಿಜಯನನ್ನು ತನ್ನ ಆಪ್ತದಾಸಿಯ ಮೂಲಕ, ಗುಟ್ಟಾಗಿ ಉದ್ಯಾನದ ಲತಾಗೃಹಕ್ಕೆ ಕರೆಯಿಸಿ, ಅಲ್ಲಿ ಆತನಿಗೆ ಕೆಲವು ಮಾಯಾ ಮಂತ್ರ ತಂತ್ರಗಳ ಮರ್ಮಗಳನ್ನು ಸಾಧ್ಯವಾದ ಮಟ್ಟಿಗೆ ತಿಳಿಸಿದುದಲ್ಲದೆ, ತನ್ನ ಬಳಿಯಲ್ಲಿದ್ದ ಆಪ್ತಸಖಿಯಾದ ಮಾಧುರಿಯು ರಾಕ್ಷಸ ಮಾಯಾ ಮಂತ್ರಾದಿಗಳನ್ನು ಚೆನ್ನಾಗಿ ಬಲ್ಲವಳಾದುದರಿಂದ ಅವಳನ್ನು ಕರೆದು, "ಮಾಧುರೀ, ಈ ನನ್ನ ಪ್ರಿಯನಿಗೆ, ನಾನಿಲ್ಲದಿರುವಾಗ ರಾಕ್ಷಸಮಾಯಾ ಮಂತ್ರಾದಿಗಳಿಂದ ಯಾವ ಅಪಾಯವೂ, ಪ್ರತಿಕೂಲವೂ ನಡೆಯದಂತೆ, ನೀನು ಆತನ ಬಳಿಯಲ್ಲಿಯೇ ಗುಟ್ಟಾಗಿದ್ದು, ಸಮಯೋಚಿತವಾದ ಎಚ್ಚರಿಕೆಗಳನ್ನು ರಹಸ್ಯ ಸಂಕೇತಗಳಿಂದ ಸೂಚಿಸುತ್ತ ಜಾಗರೂಕತೆಯಿಂದಿರಬೇಕು" ಎಂದು ಹೇಳಿ ನಿಯಮಿಸಿ ಕಳುಹಿಸಿದಳು.

ರಾಕ್ಷಸರಾಜನು ಹೇಳಿದ್ದ ವೇಳೆಗೆ ಮಧ್ಯಾಹ್ನಾತ್ಪರ ಸುಮಾರು ಮೂರು ಘಂಟೆಯ ಸಮಯಕ್ಕೆ ಆತನು ವಿಜಯನನ್ನು ಕರೆಯಿಸಿ ಅರಮನೆಯ

ವಿಲಾಸ ಮಂದಿರದಲ್ಲಿ ನಿಲ್ಲಿಸಿ, ಪುತ್ರಿಯಾದ ಚಂದ್ರಲೇಖೆಯನ್ನು ಬರುವಂತೆ ಕೂಗಿದನು. ಆ ಕೂಡಲೇ ಪರಸ್ಪರ ಲೇಶ ವ್ಯತ್ಯಾಸವೂ ಇಲ್ಲದ ಐದು ಮಂದಿ ಚಂದ್ರಲೇಖೆಯರು ಒಂದೇ ಸಮನಾದ ನಡೆನುಡಿ ದೃಷ್ಟಿ ಚಲನೆಗಳಿಂದ ಬಂದು ವಿಜಯನ ಎದುರಲ್ಲಿ ನಿಂತರು. ಉಡುಪಿನಲ್ಲಿಯಾಗಲಿ, ರೂಪಿನಲ್ಲಿ ಯಾಗಲಿ, ಧ್ವನಿಯಲ್ಲಿಯಾಗಲಿ, ಅಂಗಚೇಷ್ಟೆಗಳಲ್ಲಿಯಾಗಲಿ, ಸ್ವಲ್ಪವೂ ಭೇದ ವಿಲ್ಲದೆ ಪರಸ್ಪರ ಛಾಯೆಗಳಂತಿದ್ದ ಸರ್ವಾಲಂಕಾರಭೂಷಿತೆಯರಾದ ಐದು ಮಂದಿ ಮೋಹಿನಿಯರನ್ನು ನೋಡಿ ವಿಜಯನು ವಿಭ್ರಾಂತನಾದನು. ಆಗ ಅಗ್ನಿಶಿಖನು, "ವಿಜಯಕುಮಾರಾ, ಇವರಲ್ಲಿ ನೀನು ಮೆಚ್ಚಿರುವ ಚಂದ್ರ ಲೇಖೆಯನ್ನು ಆರಿಸಿ ಕರೆದುಕೊ" ಎಂದನು. ರಾಕ್ಷಸನು ತನಗೆ ಮೋಸ ಮಾಡಲು ಈ ರೀತಿಯಾಗಿ ಒಂದೇ ಆಕಾರವುಳ್ಳ ಚಂದ್ರಲೇಖೆಯರನ್ನು ತನ್ನ ಮಾಯಾಶಕ್ತಿಯಿಂದ ಸೃಷ್ಟಿಸಿರುವನೆಂಬುದು ವಿಜಯನ ಮನಸ್ಸಿಗೆ ಗೋಚರವಾಯಿತು. ಆ ಐದು ಮಂದಿಯಲ್ಲಿ ನಿಜವಾದ ಚಂದ್ರಲೇಖೆ ಯಾರೆಂದು ಗುರುತಿಸಲಾರದೆ ಆತನು ಸ್ತಬ್ಧನಾಗಿ ನಿಂತು ನೋಡುತ್ತಿರು ವಲ್ಲಿ, ವಿಜಯನ ಎದುರಾಗಿ ದೂರದಲ್ಲಿ ನಿಂತಿದ್ದ ಮಾಧುರಿಯು ಗಟ್ಟಿಯಾಗಿ ಸೀನಿದಳು. ಆ ಸೀನಿನ ಶಬ್ದದಿಂದ ವಿಜಯನ ದೃಷ್ಟಿಯು ಅವಳಮೇಲೆ ಬಿತ್ತು. ಆ ಕೂಡಲೆ ಮಾಯಾಮಾರ್ಗಗಳನ್ನು ಬಲ್ಲ ಚತುರೆಯಾದ ಮಾಧುರಿಯು ತನ್ನ ಬಲಗೈಯ ತರ್ಜನಿಯ ಬೆರಳಿನಿಂದ ಹಣೆಯ ಕುಂಕುಮ ವನ್ನು ಸರಿಮಾಡಿಕೊಳ್ಳುವಂತೆ ನಟಿಸಿ ವಿಜಯನ ಮುಖವನ್ನು ನೋಡಿ ಬಲಗೈ ಬೆರಳುಗಳನ್ನೆತ್ತಿ ತೋರಿಸಿದಳು. ಇದರಿಂದ ಇಂಗಿತಜ್ಞನಾಗಿಯೂ ಚಂದ್ರಲೇಖೆಯಿಂದ ಮಾಯಾಸಂಕೇತಗಳನ್ನು ಬಲ್ಲವನಾಗಿಯೂ ಇದ್ದ ವಿಜಯನು, ಎದುರಿಗಿದ್ದ ಮಾಧುರಿಯ ತರ್ಜನಿಯ ಬೆರಳು ತನ್ನ ಎಡಗಡೆ ಯಿಂದ ನಾಲ್ಕನೆಯದಾದ ಕಾರಣ, ಅಲ್ಲಿ ನಿಂತಿದ್ದ ಐದು ಮಂದಿ ಚಂದ್ರ ಲೇಖೆಯರಲ್ಲಿ ತನ್ನ ಎಡಭಾಗದಿಂದ ನಾಲ್ಕನೆಯವಳೇ ನಿಜವಾದ ಚಂದ್ರಲೇಖೆ ಯೆಂದು ನಿರ್ಧರಿಸಿ ರಾಕ್ಷಸೇಂದ್ರನ ಮುಖವನ್ನು ನೋಡಿ, "ರಾಜೇಂದ್ರಾ

ಇದೋ ಇವಳೇ ನಾನು ಮೆಚ್ಚಿರುವ ಚಂದ್ರಲೇಖೆಯು '' ಎಂದು ಆಕೆಯನ್ನು ತೋರಿಸಲು ಅವಳೇ ನಿಜವಾದ ಚಂದ್ರಲೇಖೆಯಾಗಿದ್ದಳು. ತನ್ನ ಮೋಸವು ಫಲಿಸಲಿಲ್ಲವೆಂದು ಅಗ್ನಿಶಿಖನ ಮುಖವು ಕಳೆಗೆಟ್ಟಿತು. ವಿಫಲನಾದೆನೆಂಬ ವ್ಯಸನದಿಂದ ವಿಜಯನಮೇಲೆ ಕ್ರೋಧವು ಮತ್ತಷ್ಟು ಹೆಚ್ಚಿತು. ಆದರೂ ಮಗಳಿಗೂ ವಿಜಯನಿಗೂ ತನ್ನ ಅಂತರ್ಯವನ್ನು ಬಿಡದೆ ಹೇಗಾದರೂ ಉಪಾಯದಿಂದಲೇ ಇವನನ್ನು ನಿವಾರಿಸಿಕೊಳ್ಳಬೇಕೆಂದಾಲೋಚಿಸಿ, ರಾಕ್ಷಸನು ವಿಜಯನನ್ನು ನೋಡಿ, ''ಅಯ್ಯಾ! ವಿಜಯಕುಮಾರಾ, ನಿನ್ನ ಬುದ್ಧಿಕೌಶಲಕ್ಕೆ ನಾನು ಮೆಚ್ಚಿದೆನು, ನಿನ್ನನ್ನು ವಿನೋದಕ್ಕಾಗಿ ಪರೀಕ್ಷಿಸಲು ಈ ರೀತಿ ಮಾಯಾ ಕನ್ಯೆಯರು ನಾಲ್ವರನ್ನು ನಿರ್ಮಿಸಿ ನಿಲ್ಲಿಸಿದ್ದೆನು. ನೀನು ನಿಜವಾದ ನಮ್ಮ ಚಂದ್ರಲೇಖೆಯನ್ನು ಗುರುತು ಹಿಡಿದ ಕಾರಣ ಆಕೆಯು ನಿನ್ನವಳೇ ಆಗಿರುವಳು. ನಾನು ಈ ನಿಮ್ಮಿಬ್ಬರ ವಿವಾಹ ಮಹೋತ್ಸವವನ್ನು ಅತಿ ವಿಜೃಂಭಣೆಯಿಂದ ನಡೆಯಿಸಬೇಕೆಂದು ಸಂಕಲ್ಪಿಸಿರುವೆನು. ಅದಕ್ಕಾಗಿ ನಮ್ಮ ಬಂಧುವರ್ಗವೆಲ್ಲವನ್ನೂ ಬರಮಾಡಬೇಕಾಗಿರುವುದು. ಇಲ್ಲಿಗೆ ದಕ್ಷಿಣ ದಿಕ್ಕಿನಲ್ಲಿ ಒಂದುಯೋಜನ ದೂರದಲ್ಲಿರುವ ದುರ್ಗಾವತೀ ನಗರದ ಹೊರಗಣ ಪರ್ವತದ ಗವಿಯಲ್ಲಿ ನಮ್ಮ ಅಣ್ಣನಾದ ವೀರಭೈರವನೆಂಬ ರಾಕ್ಷಸೇಂದ್ರನು ಯಜ್ಞವನ್ನು ಮಾಡುತ್ತಿರುವನು. ಅದು ನಾಳೆಗೆ ಪೂರಯಿಸುವುದು. ನಾನು ಕೊಡುವ ಲಗ್ನಪತ್ರಿಕೆಯನ್ನು ನೀನು ತೆಗೆದುಕೊಂಡು ಹೋಗಿ ಆತನಿಗೆ ಕೊಟ್ಟು ವಿವಾಹಕ್ಕೆ ಪರಿವಾರ ಸಹಿತನಾಗಿ ಬರುವಂತೆ ನಾನು ಪ್ರಾರ್ಥಿಸಿಕೊಂಡೆನೆಂದು ಹೇಳಿ ಪ್ರತ್ಯುತ್ತರವನ್ನು ತರಬೇಕು. ಅವರೆಲ್ಲರೂ ಬಂದ ಮಾರನೆಯ ದಿನವೇ ನಿಮ್ಮ ವಿವಾಹಮಂಗಳವು ನೆರವೇರುವುದು '' ಎಂದನು. ಅದಕ್ಕೆ ವಿಜಯನು ಬೇರೆ ಉಪಾಯವನ್ನರಿಯದೆ ಸಮ್ಮತಿಸಲೇ ಬೇಕಾಯಿತು. ಈ ವಿಚಾರವೆಲ್ಲವೂ, ಅಲ್ಲಿದ್ದ ಮಾಧುರಿಯ ಮೂಲಕ ಕ್ಷಣಮಾತ್ರದಲ್ಲಿ, ಚಂದ್ರಲೇಖೆಯ ಕಿವಿಯನ್ನು ಮುಟ್ಟಿತು.

ಅಗ್ನಿಶಿಖನು ಮಾಯಾಚಂದ್ರಕಳೆಯರನ್ನು ನಿರ್ಮಿಸಿ ಮಾಡಿದ ವರ ಪರೀಕ್ಷೆಯಿಂದಲೇ ಚಂದ್ರಕಳೆಗೆ ತನ್ನ ತಂದೆಯ ವಿಷಯದಲ್ಲಿ ಸಂದೇಹ ವುಂಟಾಗಿ, ಆತನು ತನ್ನ ಪ್ರಿಯನಾದ ವಿಜಯನಿಗೆ ಕೇಡನ್ನು ತರಲು ಪ್ರಯತ್ನಿಸುತ್ತಿರಬಹುದೆಂದು ತೋರಿತ್ತು. ಈ ಎರಡನೆಯ ಆಜ್ಞೆಯನ್ನು ಕೇಳಿದ ಕೂಡಲೆ, ಅವಳ ಮನಸ್ಸಿನಲ್ಲಿ ತಂದೆಯ ಕೃತ್ರಿಮವು ದೃಢ ಪಟ್ಟಿತು. ಆದುದರಿಂದ ಹೇಗಾದರೂ ವಿಜಯನನ್ನು ರಕ್ಷಿಸಬೇಕೆಂದು ಸಂಕಲ್ಪಿಸಿ, ಮಾಧುರಿಯ ಮೂಲಕ ಅವನನ್ನು ತನ್ನ ಅಂತಃಪುರಕ್ಕೆ ಗುಟ್ಟಾಗಿ ಬರಮಾಡಿಕೊಂಡು, ಅವನಿಗೆ ರಾಕ್ಷಸೇಂದ್ರನ ದುಸ್ಸ್ವಭಾವ ವನ್ನು ಕುರಿತು ಎಚ್ಚರಿಕೆಗಳನ್ನು ಕೊಟ್ಟುದಲ್ಲದೆ, ಇನ್ನೂ ಅನೇಕ ಮಂತ್ರ ಮಾಯಾಮರ್ಮಗಳನ್ನು ಬೋಧಿಸಿ, ಸ್ವಲ್ಪ ಬೂದಿಯನ್ನೂ ಒಂದು ಕಲಶದಲ್ಲಿ ನೀರನ್ನೂ ಕೆಲವು ಕಲ್ಲುಗಳನ್ನೂ ಕ್ರಮವಾಗಿ ಆಗ್ನೆ ಯಾಸ್ತ್ರ ವಾರುಣಾಸ್ತ್ರ ಪರ್ವತಾಸ್ತ್ರ ಮಂತ್ರಗಳಿಂದ ಅಭಿಮಂತ್ರಿಸಿ, ಅವನ ಕೈಗೆ ಕೊಟ್ಟು, "ಪ್ರಿಯಾ ನೀನು, ಆ ವೀರಭೈರವನ ಬಳಿಗೆ ಹೋಗಿ ಬರುವಷ್ಟರಲ್ಲಿ ನಿನಗೇನಾದರೂ ಅಪಾಯವು ಸಂಭವಿಸುವುದಾದರೆ ಇವು ಗಳಲ್ಲಿ ಯಾವುದನ್ನಾದರೂ ನಾನು ಹೇಳಿಕೊಟ್ಟಿರುವ ಆಯಾ ಮಂತ್ರ ಗಳಿಂದ ಅಭಿಮಂತ್ರಿಸಿ ಎರಚು, ಆಗ ಬೂದಿಯನ್ನೆರಚಿದರೆ ಬೆಂಕಿಯೂ, ನೀರನ್ನೆರಚಿದರೆ ಸಮುದ್ರವೂ ಕಲ್ಲನ್ನೆಸೆದರೆ ಬೆಟ್ಟಗಳೂ ನಿನ್ನ ಶತ್ರುವಿಗೆ ಅಡ್ಡಲಾಗಿ ನಿಂತು ನಿನ್ನನ್ನು ರಕ್ಷಿಸುವುವು" ಎಂದು ಹೇಳಿ ಮತ್ತೆ ಅನೇಕ ವಿಧವಾದ ಎಚ್ಚರಿಕೆಗಳನ್ನು ಕೊಟ್ಟು ಅವನನ್ನು ಬೀಳ್ಕೊಟ್ಟಳು.

---

# ಷಷ್ಠ ತರಂಗ

ಈವರೆಗೆ ಅನೇಕ ಯಕ್ಷಿಣೀ ಮಾಯಾ ಮಂತ್ರತಂತ್ರಗಳನ್ನು ಗ್ರಹಿಸಿಕೊಂಡಿದ್ದ ವಿಜಯನು, ದೇವರು ತನ್ನನ್ನು ಕೈಬಿಡದೆ ಕಾಪಾಡುವನೆಂಬ ಧೈರ್ಯದಿಂದ ಹೊರಟು, ಸರೋಜಿನಿಯ ಮನೆಗೆ ಬಂದು, ನಡೆದ ಸಂಗತಿಯನ್ನಾಕೆಗೆ ತಿಳಿಸಿ, ತನ್ನ ಮಾಯಾತುರಗವನ್ನೇರಿ ದುರ್ಗಾವತಿಯನ್ನು ಕುರಿತು ಪ್ರಯಾಣಮಾಡಿದನು. ಅನಂತರ ವಾಯುವೇಗದಿಂದ ಕುದುರೆಯಮೇಲೆ ಹೋಗಿ, ಮಾರನೆಯ ದಿನ ಮಧ್ಯಾಹ್ನ ಕಾಲಕ್ಕೆ ದುರ್ಗಾವತಿಯ ಪ್ರಾಂತವನ್ನು ಸೇರಿದನು. ಅಗ್ನಿಶಿಖನು ಹೇಳಿದ್ದ ಪರ್ವತದ ಗವಿಗೆ ಹೋಗಿ ನೋಡಲು, ಅಲ್ಲಿ ವೀರಭೈರವನು ಚಂಡಭೈರವನಾಗಿ ಅಗ್ನಿಯ ಮುಂದೆ ಕುಳಿತು ಕೆಲವು ಮಂದಿ ಮಾನವರನ್ನು ಮಾರಣ ಮಾಡುವಷ್ಟರಲ್ಲಿದ್ದನು. ದುರ್ಗಾದೇವಿಯ ಮುಂದೆ ಇದ್ದ ವಧಸ್ತಂಭದ ಬಳಿಯಲ್ಲಿ ಎಂಟು ಮಂದಿ ತರುಣ ಮಾನವರು, ಯಮದೂತರಂತಹ ಭಯಂಕರ ರಾಕ್ಷಸರಿಂದ ಹಿಡಿಯಲ್ಪಟ್ಟು ವಧೆಗೆ ಸಿದ್ಧರಾಗಿದ್ದರು. ದುರ್ಗಿಯ ಮುಂದೆ ರಕ್ತಪ್ರವಾಹವೂ ಮಾಂಸದ ರಾಶಿಗಳೂ ಭಯಂಕರವಾಗಿದ್ದುದಲ್ಲದೆ ನೂರಾರು ಕುರಿಕೋಣಗಳು ಹತವಾಗಿ ಬಿದ್ದಿದ್ದುವು. ಮನುಷ್ಯರ ತಲೆಬುರುಡೆಗಳ ಸಂಖ್ಯೆಗೆ ಪಾರವೇ ಇಲ್ಲ. ಇಂತಹ ಭೀಕರವಾದ ನೋಟದಿಂದ ವಿಜಯನ ಎದೆಯು, ಢಕ್ಕೆಂದರೂ, ಧೀರನಾದ ಅವನು ಮನಸ್ಸನ್ನು ಸ್ಥಿರಮಾಡಿಕೊಂಡು ಮುಂದೆ ನುಗ್ಗಿ ನಮಸ್ಕರಿಸಿ, ಅಗ್ನಿಶಿಖನು ಕೊಟ್ಟಿದ್ದ ಪತ್ರವನ್ನು ಅಲ್ಲಿದ್ದ ರಾಕ್ಷಸರ ಮೂಲಕ ವೀರಭೈರವನ ಕೈಗೆ ಕೊಟ್ಟು ತಾನು ಬಂದ ಕಾರ್ಯ ಗೌರವವನ್ನು ವಿಜ್ಞಾಪಿಸಿದನು. ಅದರಲ್ಲಿ ರಾಕ್ಷಸಲಿಪಿಯಿಂದ ಬರೆದಿದ್ದ ವಿಷಯವನ್ನು ವೀರಭೈರವನು ಓದಿಕೊಂಡು ಸಂತೋಷಪಟ್ಟು, ತಾನು, ಅದರಲ್ಲಿ ಬರೆದಿರುವ

ಕಾರ್ಯವನ್ನು ಕೂಡಲೆ ನೆರವೇರಿಸುವಂತೆ ಪ್ರತ್ಯಕ್ಷವಾಗಿ ಹೇಳದೆ ಮತ್ತೊಂದು
ಪತ್ರವನ್ನಾಗಲೆ ಬರೆದು, ಬಳಿಯಲ್ಲಿದ್ದ ರಕ್ತಮುಖನ ಕೈಗೆ ಕೊಟ್ಟನು.
ರಕ್ತಮುಖನು ಅದನ್ನು ತನಗೆ ಬರೆದ ಪತ್ರವೆಂದರಿಯದೆ, ಈ ತರುಣನು
ತಂದಿದ್ದ ಪತ್ರಕ್ಕೆ ಪ್ರತ್ಯುತ್ತರಪತ್ರವೆಂದು ತಿಳಿದು, ಎದ್ದು ಬಂದು
ಅದನ್ನು ದೂರದಲ್ಲಿ ನಿಂತಿದ್ದ ವಿಜಯನ ಕೈಗೆ ಕೊಟ್ಟು ತಾನು ಕಾರ್ಯಾಂತರ
ದಿಂದ ಹೊರಗೆ ಬಂದನು. ಅಗ್ನಿಯು ಮುಂದೆ ಇದ್ದ ವೀರಭೈರವನಿಗೆ
ಇದು ಗೋಚರವಾಗಲಿಲ್ಲ. ಪತ್ರವನ್ನು ತೆಗೆದುಕೊಂಡು ವಿಜಯನು,
ತಾನು ಇನ್ನು ಇಲ್ಲಿ ನಿಂತರೆ ಚಂದ್ರಲೇಖೆಯು ಹೇಳಿದ್ದಂತೆ ಅಪಾಯ
ವೇನಾದರೂ ಸಂಭವಿಸೀತೆಂದು ಅಲ್ಲಿನ ದೃಶ್ಯದಿಂದ ಸಂದೇಹಪಟ್ಟು
ಆ ಕೂಡಲೇ ಹೊರಡಲು ನಿಶ್ಚಯಿಸಿ, ಮುಂದೆ ಬಂದು ವೀರಭೈರವನಿಗೆ
ಮತ್ತೆ ನಮಸ್ಕಾರ ಮಾಡಿ, ತನ್ನ ಪ್ರಯಾಣಕ್ಕೆ ಅಪ್ಪಣೆಯನ್ನು ಬೇಡಿ
ದನು. "ನಮ್ಮ ರಕ್ತಮುಖನ ಜೊತೆಯಲ್ಲಿ ಹೋಗಿ ಅವನು ಹೇಳು
ವಂತೆ ಕೇಳು" ಎಂದು ಆಜ್ಞೆಯಾಯಿತು. ಅನಂತರ ಗವಿಯಿಂದ ಹೊರಗೆ
ಬಂದಿದ್ದ ರಕ್ತಮುಖನನ್ನು ನೋಡಲು, ಆತನು, "ದಾನವೇಂದ್ರನು
ಬರೆದ ಪ್ರತ್ಯುತ್ತರವನ್ನು ನಿನಗೆ ಕೊಟ್ಟಿರುವೆನಷ್ಟೆ! ಅದನ್ನು ನೀನು
ಎಚ್ಚರಿಕೆಯಿಂದ ತೆಗೆದುಕೊಂಡು ಹೋಗಿ ಅಗ್ನಿಶಿಖ ರಾಕ್ಷಸೇಂದ್ರನಿಗೆ
ಕೊಡಬೇಕು" ಎಂದು ಗರ್ಜಿಸಿ ಹೇಳಿದನು. ಅದನ್ನು ಕೇಳಿದ ಕೂಡಲೆ
ಸದ್ಯಕ್ಕೆ ಬದುಕಿದೆನೆಂದು ವಿಜಯನು ಕುದುರೆಯನ್ನು ಹತ್ತಿ ಪ್ರಯಾಣ
ಮಾಡಿದನು. ಅನಂತರ ರಕ್ತಮುಖನು ವೀರಭೈರವನ ಬಳಿಗೆ ಬಂದು
ಪತ್ರವನ್ನು ಕೊಟ್ಟು ಕಳುಹಿಸಿದೆನೆಂದು ವಿಜ್ಞಾಪಿಸಿದನು. ಅದನ್ನು
ಕೇಳಿದ ಕೂಡಲೇ ವೀರಭೈರವನ ಮುಖವು ಪ್ರಳಯಕಾಲ ಭೈರವನ
ಮುಖದಂತಾಯಿತು. ಆಗ ಅವನು ಕಿಡಿಕಿಡಿಯಾಗಿ, "ಎಲವೋ ರಕ್ತ
ಮುಖಾ, ಪತ್ರವನ್ನವನಿಗೇತಕ್ಕೆ ಕೊಟ್ಟೆ?" "ಅವನನ್ನು ಹಿಡಿದು,
ದುರ್ಗಿಯ ಬಲಿಗಾಗಿ ನೆಲಮಾಳಿಗೆಯಲ್ಲಿ ಕೂಡಿರು" ಎಂದು ನಿನಗಲ್ಲವೇ

ನಾನು ಪತ್ರವನ್ನು ಬರೆದುಕೊಟ್ಟುದು? ಅವನಿಗೆ ನನ್ನ ಮಾತು ಕೇಳ ಬಾರದೆಂದು ನಿನಗೆ ಪತ್ರದ ಮೂಲಕ ತಿಳಿಸಲು ಆ ರೀತಿ ಬರೆದು ಕೊಟ್ಟೆನು. ಛೀ! ಛೀ! ನೀನೆಂತಹ ಕೆಲಸಮಾಡಿದೆ! ಕೈಗೆ ಸುಲಭವಾಗಿ ಸಿಕ್ಕಿದ್ದ ಬಲಿಯನ್ನು ಬಿಟ್ಟುಬಿಟ್ಟೆಯಲ್ಲಾ!" ಎಂದು ಕೈಕೈ ಹಿಸುಕಿಕೊಂಡು ಅಲ್ಲಿದ್ದ ರಾಕ್ಷಸರನ್ನು ನೋಡಿ, "ಎಲವೋ! ಓಡಿರಿ, ಬೇಗನೆ ಓಡಿರಿ, ಆ ಬಡಮಾನವನು ಇನ್ನೆಷ್ಟು ದೂರತಾನೆ ಹೋಗಿದ್ದಾನು! ಬೆನ್ನಟ್ಟಿ ಹೋಗಿ ಆ ನರಾಧಮನನ್ನು ಈಗಲೇ ಸೆಳೆದು ತನ್ನಿ, ಈ ಜನರನ್ನಿಲ್ಲಿಯೆ ಬಿಡಿ, ನಾನಿವರನ್ನು ನೋಡಿಕೊಳ್ಳುವೆನು. ನೀವು ಮೊದಲು ಹೊರಡಿ" ಎಂದು ಕಾತುರನಾಗಿ ಗರ್ಜಿಸಿದನು. ಇದನ್ನು ಕೇಳಿದ ಕೂಡಲೇ ಆ ರಾಕ್ಷಸ ದೂತರು ತಾವು ಹಿಡಿದಿದ್ದ ಬಲಿಜನರನ್ನಲ್ಲಿಯೇ ಬಿಟ್ಟು ಓಡಿದರು. ರಕ್ತಮುಖನೂ ಓಡಿದನು. ವೀರಭೈರವನು ಕೈಗೆ ಸಿಕ್ಕಿದ್ದ ಬಲಿಯು ತಪ್ಪಿಹೋಯಿತಲ್ಲಾ! ಎಂದು ಆಗ್ರಹ ಕುತೂಹಲಗಳಿಂದ ತಾನು ಗವಿಯ ಬಾಗಿಲಿಗೆ ಬಂದು ಓಡುತ್ತಿದ್ದವರ ಮಾರ್ಗವನ್ನೇ ನೋಡುತ್ತ ನಿಂತನು. ಈ ವರೆಗೆ ವಿಜಯನು ಕುದುರೆಯಮೇಲೆ ವೇಗವಾಗಿ ಹೋಗುತ್ತಿದ್ದನು.

ಇತ್ತಲಾ ಗವಿಯಲ್ಲಿ ಬಲಿಗಾಗಿ ನಿಲ್ಲಿಸಲ್ಪಟ್ಟಿದ್ದ ತರುಣರು ಹೊರಗೆ ತಪ್ಪಿಸಿಕೊಂಡು ಹೋಗದಂತೆ ಭಯಂಕರಾಕಾರನಾದ ವೀರಭೈರವನು, ಗವಿಯ ಬಾಗಿಲಲ್ಲಿಯೇ ಕಾವಲಾಗಿ ನಿಂತಿದ್ದನಷ್ಟೆ! ಆಗ ಆ ಬಡಮಾನವರು ಪರಸ್ಪರ ಸಂಕೇತಗಳಿಂದ ಮುಖಗಳನ್ನು ನೋಡಿಕೊಂಡು ಮೆಲ್ಲನೆ ಒಟ್ಟಾಗಿ ಗವಿಯ ಬಾಗಿಲಿಗೆ ಬಂದರು. ವಿಜಯನ ಮತ್ತು ರಾಕ್ಷಸದೂತರ ಮಾರ್ಗ ವನ್ನೇ ನೋಡುತ್ತಿದ್ದ ವೀರಭೈರವನ ಗಮನವು ಗವಿಯಲ್ಲಿದ್ದ ಬಲಿಜನರ ಮೇಲೆ ಬೀಳಲಿಲ್ಲ. ಆಗ ಅವರೆಲ್ಲರೂ, ಹಿಂದು ಮುಂದಾಗಿ ಅಜಾಗ ರೂಕತೆಯಿಂದ ನಿಂತಿದ್ದ ಭೈರವನ ಹಿಂದೆ ಬಂದು ಫಕ್ಕನೆ ಅವನ ಭುಜ ಗಳನ್ನೂ ಕಾಲುಗಳನ್ನೂ ತಲೆಯನ್ನೂ ಹಿಡಿದು ಮರ್ದಿಸಲಾರಂಭಿಸಿದರು. ಸ್ವಭಾವ ಬಲಶಾಲಿಯಾದ ಅವನು ಅವರೊಡನೆ ಪ್ರಬಲವಾಗಿ ಹೋರಾಡಿ,

ವ್ಯೈಮುರಿಯುವಂತೆ ಒದೆಗಳನ್ನು ತಿಂದು ಕಡೆಗೆ ಪ್ರಾಣವುಳಿದರೆ ಸಾಕೆಂದು, ಅವರಿಂದ ಬಿಡಿಸಿಕೊಂಡು ತನ್ನ ದೂತರು ಓಡುತ್ತಿದ್ದ ಮಾರ್ಗವನ್ನೇ ಅನುಸರಿಸಿ ತಾನೂ ವಿಜಯನನ್ನು ಬೆನ್ನಟ್ಟಿದನು. ಇತ್ತಲಾ ಎಂಟು ಮಂದಿಯೂ ಮೃತ್ಯುವಿನ ದವಡೆಗೆ ಸಿಕ್ಕಿ ತಪ್ಪಿ ಬಂದೆವೆಂದು ಸಂತೋಷದಿಂದ ತಮ್ಮ ಭಾಗದ ದೇವರಾಗಿ ಬಂದ ವಿಜಯನನ್ನು ಸ್ತೋತ್ರಮಾಡುತ್ತ ಓಡಿಹೋಗಿ ಪ್ರಾಣಗಳನ್ನು ಉಳಿಸಿಕೊಂಡರು.

ವಿಜಯನಾದರೋ ವಾಯುವೇಗದಿಂದ ಕುದುರೆಯಮೇಲೆ ಓಡುತ್ತಿದ್ದನು. ರಕ್ತಮುಖನೇ ಮೊದಲಾದ ರಾಕ್ಷಸರು ಕುದುರೆಗಿಂತಲೂ ವೇಗವಾಗಿ ಓಡುತ್ತ, ಕುದುರೆಗೆ ಕಲ್ಲುಗಳನ್ನು ಬೀರುತ್ತ ಬೆನ್ನಟ್ಟಿ ಬಹು ದೂರ ಹೋದರು. ಕಲ್ಲುಗಳು ಕಾಲುಗಳಿಗೆ ತಗುಲಿ ರಕ್ತವು ಸುರಿಯುತ್ತಿದ್ದರೂ ಆ ಜಾತ್ಯಶ್ವವು ಸ್ವಲ್ಪವೂ ಶಕ್ತಿಕುಂದದೆ ಒಂದೇ ಸಮವಾದ ವೇಗದಿಂದ ಓಡುತ್ತಿತ್ತು. ಸ್ವಲ್ಪ ಹೊತ್ತಿನೊಳಗಾಗಿ ವೀರಭೈರವನೂ ಹಿಂದಣಿಂದ ಓಡಿಬಂದು ಈ ಗುಂಪನ್ನು ಸೇರಿದನು. ಇವರೆಲ್ಲರೂ ಕ್ಷಣಕ್ಷಣಕ್ಕೂ ಉಕ್ಕುವ ರೋಷಾವೇಶದಿಂದ ಓಡಿ ಕಟ್ಟಕಡೆಗೆ ವಿಜಯನ ಕುದುರೆಯನ್ನು ಅಡ್ಡಗಟ್ಟಿದರು. ವಿಜಯನು ಹೆದರದೆ ಕುದುರೆಯನ್ನು ಅವರ ಮೇಲೆ ಹಾರಿಸಿಕೊಂಡು ನಡೆದನು. ವಿಫಲರಾದ ಅವರ ರೋಷವು ಮತ್ತೆ ಮತ್ತೆ ಉಕ್ಕಿ ಬರುತ್ತಿದ್ದರೂ ವಿಜಯನನ್ನು ಹಿಡಿದು ನಿಲ್ಲಿಸಲು ಸಾಧ್ಯವಾಗಲಿಲ್ಲ. ಇದರಿಂದ ವೀರಭೈರವನು ಬಳಲಿ ಬೆಂಡಾಗಿ ಬೇಸತ್ತು ಕಡೆಗೆ ತನ್ನ ಮಂತ್ರ ಮಾಯಾಶಕ್ತಿಗಳನ್ನು ಪ್ರಯೋಗಿಸಲೇಬೇಕಾಗಿ ನಿರ್ಧರಿಸಿದನು. ತಕ್ಕ ಸಲಕರಣೆಗಳು ಯಾವುವೂ ತತ್ಕಾಲದಲ್ಲಿ ಬಳಿಯಲ್ಲಿರಲಿಲ್ಲ. ಆದರೂ ಮಾರ್ಗದಲ್ಲಿ ಬೆಳೆದಿದ್ದ ಮುಳ್ಳುಗಿಡವೊಂದನ್ನು ಕಿತ್ತು ಮಂತ್ರಿಸಿ ವಿಜಯನ ಕಡೆಗೆ ಎಸೆದನು. ಆ ಕೂಡಲೇ ಅವನ ಸುತ್ತಲೂ ಅಗಾಧವಾದ ಮುಳ್ಳುಗಿಡಗಳ ಪೊದೆಯು ಆವರಿಸಿ ಅವನನ್ನು ಮುಂದಕ್ಕೆ ಹೋಗದಂತೆ ಮಾಡಿತು. ವಿಜಯನು ದಿಕ್ಕು ತೋರದೆ ಸ್ವಲ್ಪ ನಿಲ್ಲುವಷ್ಟ

ರಲ್ಲಿ ರಾಕ್ಷಸರು ಸಮೀಪಗತರಾದರು. ಆಗ ವಿಜಯನು ಸ್ವಲ್ಪ ಭಸ್ಮ ವನ್ನು ತೆಗೆದು ಮಂತ್ರಿಸಿ ಸುತ್ತಲೂ ಎರಚಿದನು. ಆ ಕ್ಷಣವೇ ಅದ್ಭುತ ವಾದ ಬೆಂಕಿಯು ಹುಟ್ಟಿ ಆ ಮುಳ್ಳುಪೊದೆಗಳೆಲ್ಲವನ್ನೂ ಸುಟ್ಟು ಭಸ್ಮಮಾಡಿತು. ಈವರೆಗೆ|ವಿಜಯನ ಸಮೀಪಕ್ಕೆ ಬರುತ್ತಿದ್ದ ರಾಕ್ಷಸರಲ್ಲಿ ಇಬ್ಬರು ಆ ಅಗ್ನಿಗೆ ಸಿಕ್ಕಿ|ಭಸ್ಮವಾದರು. ಅನಂತರ ಕಲಶದ ನೀರನ್ನು ತೆಗೆದು ಒಂದು ಹನಿಯಷ್ಟನ್ನು ಮಂತ್ರಿಸಿ ಎರೆಚಿದ ಕೂಡಲೇ ಅದು ನೀರಿನ ಪ್ರವಾಹವಾಗಿ ಸುತ್ತಲೂ ಇದ್ದ ಬೆಂಕಿಯನ್ನಾರಿಸಿತು. ಆಗ ವಿಜಯನು ರತ್ನದ್ವೀಪದ ಮಾರ್ಗವನ್ನನುಸರಿಸಿ ವೇಗದಿಂದ ಪ್ರಯಾಣ ಮಾಡಿದನು. ಭೈರವಾದಿ ರಾಕ್ಷಸರು ತಮ್ಮ ಮಾಯಾಮಂತ್ರಗಳೂ ವಿಫಲ ವಾದುದನ್ನು ಕಂಡು ವಿಜಯನ ಮಂತ್ರಶಕ್ತಿಗೆ ಆಶ್ಚರ್ಯಪಟ್ಟರೂ ಅವ ನನ್ನು ಹೇಗಾದರೂ ಹಿಡಿದು ಬಲಿಯಿಕ್ಕಬೇಕೆಂದು ನಿರ್ಧರಮಾಡಿಕೊಂಡು ಮತ್ತೆ ಅವನನ್ನು ಬಿಡದೆ ಹಿಂಬಾಲಿಸುತ್ತಲೇ ಹೋದರು. ಕುದುರೆಯ ಕಾಲಿಗೆ ರಾಕ್ಷಸರ ಕಲ್ಲುಗಳ ಪೆಟ್ಟುಗಳು ಬಲವಾದುವು. ಇನ್ನೂ ಇವರ ಹಾವಳಿ ತಪ್ಪಲಿಲ್ಲವೆಂದು ವಿಜಯನು ಮತ್ತೆ ತನ್ನ ಕಲಶವನ್ನು ತೆಗೆದು ಒಂದು ಹಿಡಿಯಷ್ಟು ಜಲವನ್ನು ಮಂತ್ರಿಸಿ ಅವರ ಕಡೆಗೆ ಚೆಲ್ಲಿದನು. ಆ ಕೂಡಲೇ ಅದು ಸಮುದ್ರದಂತೆ ರಾಕ್ಷಸರ ಮುಂದೆ ನಿಂತಿತು. ಮಾಯಾ ವಿದ್ಯಾವಿಚಕ್ಷಣರಾದ ವೀರಭೈರವಾದಿಗಳಿಗೆ ಇವನ ಮಂತ್ರಶಕ್ತಿಯು ಮತ್ತಷ್ಟು ಕ್ರೋಧಾಸೂಯೆಗಳನ್ನೂ ಹಠವನ್ನೂ ಉಕ್ಕಿಸಿತು. ಅವ ರೆಲ್ಲರೂ ಆ ನೀರಿನಲ್ಲಿಯೇ ವೇಗವಾಗಿ ಈಜುತ್ತ ಸ್ವಲ್ಪ ದೂರ ಬಂದರು. ಅವನನ್ನು ಹಿಡಿಯಲು ಮಾತ್ರ ಸಾಧ್ಯವಾಗಲಿಲ್ಲ. ಕಡೆಗೆ ಆ ನೀರಿನಲ್ಲಿದ್ದ ಮೊಸಳೆಗಳನ್ನು ಹಿಡಿದು ತಮ್ಮ ಮಂತ್ರಶಕ್ತಿಯಿಂದ ಅವುಗಳನ್ನು ತಾವು ಹೇಳಿದಂತೆ ಕೇಳುವ ಹಾಗೆ ಮಾಡಿಕೊಂಡು ಎಲ್ಲರೂ ಅವುಗಳ ಮೇಲೆ ಕುಳಿತು ಮೊಸಳೆಗಳನ್ನು ವೇಗವಾಗಿ ಓಡಿಸುತ್ತ ಬಂದು ಸಮುದ್ರ ತೀರವನ್ನು ಸೇರಿದರು.

ಈವರೆಗೆ ಆಯಾಸಪಟ್ಟಿದ್ದ ವಿಜಯನು ಕುದುರೆಯ ವೇಗವನ್ನು ಕಡಿಮೆಮಾಡಿ, ಸ್ವಲ್ಪ ವಿರಾಮವು ಸಿಕ್ಕಿತೆಂದು ಒಂದು ಮರದ ಕೆಳಗೆ ವಿಶ್ರಮಿಸಿಕೊಳ್ಳಬೇಕೆಂದಿರುವಷ್ಟರಲ್ಲಿ ರಾಕ್ಷಸರ ಗುಂಪು ಘೋರಾರ್ಭಟದಿಂದ ಸಮುದ್ರವನ್ನು ದಾಟಿ ಬರುತ್ತಿರುವುದು ಗೋಚರವಾಯಿತು. ಅವರನ್ನು ಮತ್ತೆ ನೋಡಿದೊಡನೆಯೇ ಅವನಿಗೆ ಅತ್ಯಾಶ್ಚರ್ಯವೂ ಭಯವೂ ಉಂಟಾದರೂ ಬೆದರಿದ್ದ ಮನವನ್ನು ಸ್ಥಿರಪಡಿಸಿಕೊಂಡು, ಎದೆಗುಂದದೆ ಕುದುರೆಯನ್ನು ಮತ್ತೆ ವೇಗವಾಗಿ ಓಡಿಸುತ್ತ ತನ್ನಲ್ಲಿದ್ದ ಕಲ್ಲುಗಳಲ್ಲಿ ಒಂದನ್ನು ತೆಗೆದು ಮಂತ್ರಿಸಿ ರಾಕ್ಷಸರ ಕಡೆಗೆ ಬೀಸಿ ಎಸೆದನು. ಆ ಕ್ಷಣವೇ ಅದು ದೊಡ್ಡ ಬೆಟ್ಟವಾಗಿ ರಾಕ್ಷಸರಿಗೆ ಅಡ್ಡಲಾಗಿ ನಿಂತಿತು. ಭೈರವನೂ ರಾಕ್ಷಸರೂ ಸಹ ಮಹಾಕ್ರೋಧದಿಂದ ಅದನ್ನೂ ಹತ್ತಿ ಇಳಿಯುತ್ತ ಬಂದರು. ಮುಖ್ಯವಾಗಿ ನಾನಾ ಯಕ್ಷಿಣೀ ಮಂತ್ರ ಮಾಯೆಗಳನ್ನು ಬಲ್ಲ, ಇವನನ್ನು ಹಿಡಿದು ವಧಿಸದೆ ಬಿಟ್ಟರೆ ಮುಂದೆ ಇವನಿಂದ ತನ್ನ ತಮ್ಮನಾದ ಅಗ್ನಿಶಿಖನಿಗೂ ತನಗೂ ಅಪಾಯವೇ ಸಂಭವಿಸುವುದೆಂಬ ಸಂದೇಹವು ಪ್ರಬಲವಾದುದರಿಂದ, ಎಷ್ಟು ಕಷ್ಟಪಟ್ಟಾದರೂ ಅವನನ್ನು ಬಲಿದೆಗೆದುಕೊಳ್ಳಬೇಕೆಂದು ವೀರಭೈರವನು ಮನಸ್ಸಿನಲ್ಲಿ ಸ್ಥಿರಸಂಕಲ್ಪ ಮಾಡಿಕೊಂಡನು. ವಿಜಯನು ವಾಯುವೇಗದ ತುರಗದ ಮೇಲೆ ಓಡುತ್ತ ಹಿಂದಿರುಗಿ ನೋಡುವಲ್ಲಿ ಈ ಪಿಶಾಚ ಸಂಘವು ಬೆನ್ನಟ್ಟಿ ಬರುತ್ತಲೇ ಇತ್ತು. ಅವರು ಆ ಬೆಟ್ಟವನ್ನು ಇಳಿದು ಬರುವಷ್ಟರಲ್ಲಿ ವಿಜಯನು ದಟ್ಟವಾದ ಒಂದು ಅರಣ್ಯಕ್ಕೆ ಬಂದು ಅವರ ಕಣ್ಣಿಗೆ ಮರೆಯಾದನು. ಇಷ್ಟು ಹೊತ್ತಿಗೆ ಅವನಿಗೆ ಆಯಾಸವು ಮಿತಿಮೀರಿತು. ವಿಶ್ರಮಿಸಿಕೊಳ್ಳಬೇಕೆಂದು ಕುದುರೆಯಿಂದಿಳಿದು ಒಂದು ಮರದ ಕೆಳಗೆ ಸ್ವಲ್ಪ ಕುಳಿತುಕೊಳ್ಳುವಷ್ಟರಲ್ಲಿ ಮೃತ್ಯು ದೇವತೆಗಳಂತೆ ರಾಕ್ಷಸರು ಅದ್ಭುತಾರ್ಭಟದಿಂದ ಸಮೀಪಗತರಾದರು. ಇನ್ನು ಬೇರೆ ಉಪಾಯವಿಲ್ಲವೆಂದಾಲೋಚಿಸಿ ಆ ಕ್ಷಣವೇ ಮತ್ತೆ ಕುದುರೆಯ ಮೇಲೆ ಹಾರಿ ಕುಳಿತು, ತನ್ನ ಚೀಲದಲ್ಲಿದ್ದ ಬೂದಿಯಲ್ಲಿ

ಒಂದು ಹಿಡಿಯಷ್ಟನ್ನು ತೆಗೆದು ಚಂದ್ರಲೇಖೆಯು ಹೇಳಿಕೊಟ್ಟಿದ್ದ ಆಗ್ನೇಯಾಸ್ತ್ರ ಮಂತ್ರದಿಂದಭಿಮಂತ್ರಿಸಿ ಅವರ ಕಡೆಗೆರಚಿದನು. ಆ ಕೂಡಲೇ ಆ ಅರಣ್ಯವೆಲ್ಲಕ್ಕೂ ಬೆಂಕಿ ಹತ್ತಿ ಪ್ರಳಯಾಗ್ನಿಯಂತೆ ಉರಿಯುತ್ತ ರಾಕ್ಷಸರ ಗುಂಪಿಗೆ ಅಡ್ಡವಾಯಿತು. ಭೈರವನು ಅಗ್ನಿಸ್ತಂಭನವನ್ನು ಬಲ್ಲವನಾದರೂ ತಕ್ಕ ಮಾಯಾಮಂತ್ರ ವಸ್ತುಗಳ ಸಹಾಯವಿಲ್ಲದೆ ಏನನ್ನೂ ಮಾಡಲಾರದೆ ಹೋದನು. ಇದರಿಂದ ವಿಜಯನನ್ನು ಹಿಡಿಯುವುದು ಅಸಾಧ್ಯವೆಂದೇ ಅವನ ಮನಸ್ಸಿಗೆ ತೋರಿತು. ಆದಕಾರಣ ಅಗ್ನಿಜ್ವಾಲೆಯನ್ನು ನಿವಾರಿಸಿಕೊಳ್ಳಲು ಸಾಧ್ಯವಿಲ್ಲದೆ ಕೈ ಕೈಗಳನ್ನು ಹಿಸಿಕಿಕೊಳ್ಳುತ್ತ ರಾಕ್ಷಸ ದೂತರೊಡನೆ ಜೋಲುಮುಖವನ್ನು ಹಾಕಿಕೊಂಡು ಹಿಂದಿರುಗಬೇಕಾಯಿತು. ಇಷ್ಟು ಹೊತ್ತಿಗೆ ವಿಜಯನು ಬಹುದೂರ ಪ್ರಯಾಣಮಾಡಿ ಸಂಧ್ಯಾಸಮಯಕ್ಕೆ ರತ್ನದ್ವೀಪದ ಎಲ್ಲೆಯನ್ನು ಸೇರಿದನು. ಕುದುರೆಯೂ ತಾನೂ ಬಹಳ ದಣಿದಿದ್ದಕಾರಣ ಸ್ವಲ್ಪ ವೇಗವನ್ನು ಕಡಿಮೆಮಾಡಿ ರತ್ನಾವತೀ ಪ್ರಾಂತವನ್ನು ಸೇರಲು, ಸೂರ್ಯನು ಅಸ್ತಂಗತನಾದನು. ವಿಜಯನು ಕತ್ತಲಾದಮೇಲೆ ನಗರವನ್ನು ಪ್ರವೇಶಿಸಿ ಗುಟ್ಟಾಗಿ ಸರೋಜಿನಿಯ ಮನೆಗೆ ಹೋಗಿ, ಆಕೆಗೆ ತನ್ನ ವೃತ್ತಾಂತವೆಲ್ಲವನ್ನೂ ತಿಳಿಸಿ ಆ ರಾತ್ರಿ ಅಲ್ಲಿ ವಿಶ್ರಮಿಸಿಕೊಂಡು ಮಾರ್ಗಾಯಾಸವನ್ನು ಪರಿಹರಿಸಿಕೊಂಡನು.

---

# ಸಪ್ತಮ ತರಂಗ

ಇತ್ತ ರತ್ನಾವತಿಯ ಅರಮನೆಯಲ್ಲಿ ಮಾರನೆಯ ದಿನ ಅಗ್ನಿಶಿಖ ರಾಕ್ಷಸೇಂದ್ರನು ತನ್ನ ಪತ್ರದಂತೆ ಈವರೆಗೆ ವೀರಭೈರವನು ವಿಜಯನನ್ನು ದುರ್ಗಿಗೆ ಬಲಿಗೊಟ್ಟೇ ಇರುವನೆಂಬ ದೃಢವಾದ ನಂಬಿಕೆಯಿಂದ ಶತ್ರುನಿವಾರಣೆಯಾಯಿತೆಂದು ತನ್ನಲ್ಲಿ ತಾನು ಸಂತೋಷಪಟ್ಟುಕೊಂಡಿದ್ದನು. ಆ ದಿನ ಶುಕ್ರವಾರವಾದುದರಿಂದ ಪದ್ಧತಿಯಂತೆ ತಾನು ಆ ಊರಿಗೆ ಸ್ವಲ್ಪ

ದೂರದಲ್ಲಿ ಸುವರ್ಣಾದ್ರಿಯ ಮೇಲೆ ಇದ್ದ ತಮ್ಮ ಕುಲದೈವವಾದ ಮಹಾಕಾಳಿಯ ದರ್ಶನಕ್ಕೆ ಮಂತ್ರಿಪರಿವಾರಸಹಿತನಾಗಿ ಹೋಗಿ ಬರ ಬೇಕಾಗಿತ್ತು. ಇದರಿಂದ ಎಲ್ಲವನ್ನೂ ಸಿದ್ಧಪಡಿಸಿಕೊಂಡು, ಪುತ್ರಿಯಾದ ಚಂದ್ರಲೇಖೆಗೆ ಎಚ್ಚರಿಕೆಯನ್ನು ಹೇಳಿ, ತಾನು ಬೆಟ್ಟದಮೇಲೆಯೇ ಆ ದಿನ ವೆಲ್ಲವೂ ವಿನೋದವಾಗಿದ್ದು ಮಾರನೆಯ ದಿನ ಪ್ರಾತಃಕಾಲಕ್ಕೆ ಮನೆಗೆ ಬರುವುದಾಗಿ ತಿಳಿಸಿ ಪರಿವಾರದೊಡನೆ ಹೊರಟು ನಿಂತಿದ್ದನು. ಆ ಸಮಯಕ್ಕೆ ಸರಿಯಾಗಿ ಪತ್ರಹಸ್ತನಾದ ವಿಜಯನು ಬಂದು ನಮ ಸ್ಕರಿಸಿದನು. ಅವನ ಮುಖವನ್ನು ನೋಡಿದೊಡನೆಯೇ ಅಗ್ನಿಶಿಖ ನಿಗೆ ಆಶ್ಚರ್ಯಕ್ರೋಧಗಳು ಮಿತಿಮೀರಿದವು ಇವನು ನಿಜವಾಗಿಯೂ, ದುರ್ಗಾವತಿಗೆ ಹೋಗದೆ ತನ್ನಾಜ್ಞೆಯನ್ನುಲ್ಲಂಘಿಸಿರಬೇಕೆಂಬ ಸಂದೇಹವು ಮನಸ್ಸಿನಲ್ಲಿ ಉಂಟಾಯಿತು. ಆದರೆ ಪತ್ರವನ್ನು ಬಿಚ್ಚಿನೋಡುವಲ್ಲಿ, ಅದರಲ್ಲಿ ತನ್ನ ಅಣ್ಣನಾದ ವೀರಭೈರವನ ಲಿಖಿತವೇ ಇತ್ತು. ಮತ್ತು ತಾನು ಬರೆದಿದ್ದ ವಿಷಯಗಳಿಗೆ ತಕ್ಕಂತೆ "ವಿಜಯನನ್ನು ದುರ್ಗಿಯ ಬಲಿಗಾಗಿ ನೆಲಮಾಳಿಗೆಗೆ ಸೇರಿಸು" ಎಂದು ಬರೆದಿತ್ತಲ್ಲದೆ ಮತ್ತೇನೂ ಇರಲಿಲ್ಲ. ಇದರಿಂದ ವೀರಭೈರವನು ತನ್ನ ದೂತನಿಗೆ ಬರೆದ ಪತ್ರವನ್ನು ಇವನು ಅಪಹರಿಸಿ ಅವರ ಕೈಯಿಂದ ತಪ್ಪಿಸಿಕೊಂಡು ಕಳ್ಳತನದಿಂದ ಓಡಿಬಂದಿರುವ ನೆಂಬುದೇ ಅಗ್ನಿಶಿಖನ ಮನಸ್ಸಿನಲ್ಲಿ ಸ್ಥಿರವಾಯಿತು. ಆಗ ತನ್ನ ಪ್ರಯತ್ನವು ಈ ಸಲವೂ ವ್ಯರ್ಥವಾಯಿತೆಂಬ ಕ್ರೋಧದಿಂದ ಹುಬ್ಬು ಗಂಟಿಕ್ಕಿ, ಕಣ್ಣುಗಳಲ್ಲಿ ಬೆಂಕಿಯನ್ನು ಸುರಿಸುವನಂತೆ ದುರುದುರನೆ ನೋಡಿ, "ಎಲವೋ, ಈ ಪತ್ರವನ್ನು ನಿನಗೆ ಕೊಟ್ಟವರು ಯಾರು? ನಿಜವಾದ ಸಮಾಚಾರವೆಲ್ಲವನ್ನೂ ವಿವರವಾಗಿ ತಿಳಿಸು" ಎಂದು ಗರ್ಜಿಸಿ ಕೇಳಿದನು. ಅದಕ್ಕೆ ವಿಜಯನು ದುರ್ಗಾವತಿಯ ಗವಿಯಲ್ಲಿ ನಡೆದ ವಿಷಯಗಳನ್ನು ಮಾತ್ರ ತಿಳಿಸಿ, ಆ ಪತ್ರವನ್ನು ರಾಕ್ಷಸನೊಬ್ಬನು ತಂದು ತನ್ನ ಕೈಗೆ ಕೊಟ್ಟ ನೆಂತಲೂ, ಅದನ್ನು ತೆಗೆದುಕೊಂಡು ತಾನು ಕೂಡಲೆ ಹೊರಟು ಬಂದೆ

ನೆಂತಲೂ ಮತ್ತು ತನ್ನನ್ನು ರಾಕ್ಷಸರು ಅಟ್ಟಿ ಬಂದು ಹಿಡಿಯಲಾರದೆ ವಿಫಲರಾಗಿ ಹಿಂದಿರುಗಿದರೆಂತಲೂ ಮಾತ್ರ ತಿಳಿಸಿದನೇ ಹೊರತು, ಚಂದ್ರ ಲೇಖೆಯು ತನಗೆ ಉಪದೇಶಮಾಡಿದ ಮಂತ್ರ ಮಾಯಾಶಕ್ತಿ ಸಾಧನಗಳಿಂದ ತಾನು ರಾಕ್ಷಸರಿಂದ ತಪ್ಪಿಸಿಕೊಂಡು ಬಂದೆನೆಂಬ ವಿಚಾರವನ್ನು ಮಾತ್ರ ಅವನು ತಿಳಿಸಲಿಲ್ಲ. ವೀರಭೈರವನ ಭಟರಕೈಗೆ ಸಿಕ್ಕದೆ ಇವನು ತಪ್ಪಿಸಿ ಕೊಂಡ ವಿಚಾರವನ್ನು ಕೇಳಿ ಅಗ್ನಿಮುಖನಿಗೆ ಪರಮಾಶ್ಚರ್ಯವೂ, ಇವನ ವಿಷಯದಲ್ಲಿ ತಾನು ಮಾಡಿದ ಎರಡು ಪ್ರಯತ್ನಗಳೂ ಭಗ್ನವಾದುವಾದುದ ರಿಂದ ಮಹಾಕ್ರೋಧವೂ ಉಕ್ಕಿ ಬಂದರೂ, ತನ್ನ ಅಂತರಂಗಭಾವವು ತನ್ನ ಪುತ್ರಿಗೆ ತಿಳಿಯಬಾರದೆಂದು ಮುಖದಲ್ಲಿ ಮಾತ್ರ ಸೌಮ್ಯಭಾವವನ್ನೇ ತೋರಿಸುತ್ತ, ಅಲ್ಲಿದ್ದ ಕೆಲವು ಮಂದಿ ಸೇವಕರನ್ನು ಕರೆದು, "ಚಂದ್ರ ಲೇಖೆಗೆ ತಿಳಿಯದಂತೆ ಇವನನ್ನು ಕಾರಾಗೃಹದಲ್ಲಿ ಸೇರಿಸಿ ಚಿತ್ರಹಿಂಸೆ ಮಾಡುತ್ತಿರಿ. ನಾಳೆ ಪ್ರಾತಃಕಾಲಕ್ಕೆ ನಾನು ಬಂದು ಇವನ ವಿಷಯವಾಗಿ ಬೇರೆ ಆಜ್ಞೆಮಾಡುವೆನು" ಎಂದು ರಾಕ್ಷಸಭಾಷೆಯಿಂದ ಹೇಳಿ, ವಿಜಯ ನನ್ನು ಬಳಿಗೆ ಕರೆದು ವಿನಯದಿಂದ, "ವಿಜಯಕುಮಾರಾ, ನಿನ್ನ ಸಾಹಸಕ್ಕೂ ಚಾತುರ್ಯಕ್ಕೂ ನಾನು ಮೆಚ್ಚಿದೆನು. ನಿನ್ನಂತಹ ವರನು ನನ್ನ ಕುಮಾರಿಗೆ ದೊರೆತುದರಿಂದ ನನಗೆ ಬಹಳ ಸಂತೋಷವಾಯಿತು. ನೀನು ಬಹಳ ಆಯಾಸಪಟ್ಟು ಬಂದಿರುವಂತೆ ಕಾಣುವೆ; ಹೋಗು, ನಮ್ಮ ಪರಿಚಾರಕರು ನಿನ್ನನ್ನು ಪಚರಿಸುವರು, ನಾನು ಸುವರ್ಣಗಿರಿಗೆ ಹೋಗಿ ಸಂಧ್ಯಾಕಾಲಕ್ಕೆ ಬಂದು ಮತ್ತೆ ನಿನ್ನನ್ನು ಕಾಣುವೆನು" ಎಂದು ಹೇಳಿ ಪರಿವಾರ ಸಹಿತ ನಾಗಿ ಸುವರ್ಣಗಿರಿಗೆ ಹೊರಟುಹೋದನು. ಇಷ್ಟೆಲ್ಲವೂ ನಡೆಯುವಾಗ ಮಾಯಾವಿನಿಯಾದ ಮಾಧುರಿಯು ಯಾರಿಗೂ ಕಾಣದಂತೆ ಬಾಗಿಲ ಹಿಂಭಾಗದಲ್ಲಿ ನಿಂತು ಎಲ್ಲ ವಿಷಯಗಳನ್ನೂ ಗ್ರಹಿಸಿದ್ದಳು. ಆದುದರಿಂದ ಅಗ್ನಿಶಿಖನು ಹೊರಟುಹೋದ ಕೂಡಲೇ ಅವಳು ವಿಜಯನಿಗೆ ಗೋಚರ ಳಾಗಿ, ಆ ಸೇವಕರ ಹಿಂದೆ ಹೋಗಬೇಡವೆಂದು ಸಂಜ್ಞೆಮಾಡಿ ಹೇಳಿ,

ಆ ಕ್ಷಣವೇ ಹೋಗಿ ನಡೆದ ವೃತ್ತಾಂತವೆಲ್ಲವನ್ನೂ ಚಂದ್ರಲೇಖೆಗೆ ತಿಳಿಸಿದಳು. ವಿಜಯನು ದುರ್ಗಾವತಿಯಿಂದ ಸುರಕ್ಷಿತನಾಗಿ ಬಂದನೆಂದವಳಿಗೆ ಸಂತೋಷವಾದರೂ ಮುಂದೆ ತಮ್ಮ ತಂದೆಯಿಂದ ಅವನಿಗೆ ನಾಶವೇ ಸಂಭವಿಸುವುದೆಂಬುದು ಅವಳ ಮನಸ್ಸಿಗೆ ನಿರ್ಧರವಾಯಿತು. ಅಲ್ಲದೆ ತಾನು ಈ ಕಾಲದಲ್ಲಿ ಸುಮ್ಮನಿರುವುದಾದರೆ ಮುಂದೆ ತನಗೂ ಇದರಿಂದ ಅನರ್ಥಗಳೇ ಉಂಟಾಗುವುವೆಂಬ ಭೀತಿಯೂ ಸಹ ಪ್ರಬಲವಾಗಿ ತೋರಿತು. ಆದುದರಿಂದ ಕಾತುರಳಾಗಿ ಮಾಧುರಿಯನ್ನು ಕರೆದು, ಯಕ್ಷಿಣೀ ವಸ್ತುಗಳನ್ನು ಸಿದ್ಧಪಡಿಸಿಕೊಂಡು ಬರುವಂತೆ ಹೇಳಿ, ತಾನೂ ತನ್ನ ಯಕ್ಷಿಣೀ ಸಾಮಗ್ರಿಗಳೊಡನೆ ವಿಜಯನನ್ನು ಕಾಪಾಡಲು ಹೊರಟಳು.

ಈ ವರೆಗೆ ರಾಕ್ಷಸ ಭಟರು ಹಿರಿದ ಕತ್ತಿಗಳಿಂದ ವಿಜಯನನ್ನು ಬಳಸಿ, ಬೇರೆ ಮಾರ್ಗದಿಂದ ಕಾರಾಗೃಹಕ್ಕೆ ಕರೆದುಕೊಂಡು ಹೋಗುತ್ತಿದ್ದರು. ಮಾಧುರಿಯ ಸಂಜ್ಞೆಯಂತೆ ವಿಜಯನಿಗೆ ಅಪಾಯವು ಪ್ರತ್ಯಕ್ಷವಾಗಿಯೇ ಕಂಡು ಬಂದಿತು. ಆದರೂ ಬುದ್ಧಿಶಾಲಿಯಾದ ಅವನು ಧೈರ್ಯಗೆಡದೆ ಆ ವೀರಭಟರನ್ನು ಬಹು ವಿನಯವಾಗಿ ಮಾತನಾಡಿಸುತ್ತ, ಕಾರಾಗೃಹವನ್ನು ಸೇರುವುದರೊಳಗಾಗಿ ತನ್ನ ಎಡಬಲದಲ್ಲಿದ್ದ ಇಬ್ಬರು ವೀರರ ಕೈಗಳಲ್ಲಿದ್ದ ಎರಡು ಖಡ್ಗಗಳನ್ನು ತನ್ನ ಎರಡು ಕೈಗಳಿಂದಲೂ ಫಕ್ಕನೆ ಸೆಳೆದುಕೊಂಡು, ಆ ಭಟರ ಮೇಲೆಯೇ ಪ್ರಯೋಗಿಸಲಾರಂಭಿಸಿದನು. ದೈತ್ಯಭಟರಿಗೂ ವಿಜಯನಿಗೂ ಪ್ರಬಲವಾದ ಖಡ್ಗಯುದ್ಧವೇ ನಡೆದು ನಾಲ್ಕಾರು ಮಂದಿ ಭಟರು ನೆಲಕ್ಕುರುಳಿದರು. ಇದನ್ನು ನೋಡಿ ರಾಕ್ಷಸರನೇಕರು ವಿಜಯನ ಮೇಲೆ ಬೀಳಲು ಬಂದರು. ಆ ಕೂಡಲೇ ವಿಜಯನು ತನ್ನಲ್ಲಿದ್ದ ಸ್ವಲ್ಪ ಭಸ್ಮವನ್ನು ತೆಗೆದು ಮಂತ್ರಿಸಿ ಅವರಮೇಲೆ ಎರಚಲು ಅವರೆಲ್ಲರೂ ಧಗ್ಗನೆ ಉರಿದು ಬೂದಿಯಾದರು.

ಇಷ್ಟು ಹೊತ್ತಿಗೆ ಚಂದ್ರಲೇಖೆಯೂ ಮಾಧುರಿಯೂ ಸಹ ತಮ್ಮ ಯಕ್ಷಿಣೀ ಸಾಮಗ್ರಿಗಳೊಡನೆ ಆ ಸ್ಥಳಕ್ಕೆ ಬಂದು ನಡೆದಿದ್ದ ಅನರ್ಥ

ಗಳನ್ನು ನೋಡಿ, ಇನ್ನು ದಾನವೇಂದ್ರನಿಗೆ ಈ ವಿಚಾರವು ತಿಳಿಯುವು
ದಾದರೆ ವಿಜಯನನ್ನು ಪ್ರಾಣದಿಂದ ಬಿಡಲೇ ಬಿಡನೆಂದು ನಿರ್ಧರಿಸಿದರು.
ಇದರಿಂದ ಚಂದ್ರಲೇಖೆಗೆ "ಪಲಾಯನವೇ ಪರಮೋಪಾಯ" ವೆಂದು
ತೋರಿತು. ಆಗ ಮಾಧುರಿಯ ಮೂಲಕ ತಮ್ಮ ಪ್ರಯಾಣಕ್ಕೆ ಸಮಸ್ತ
ವನ್ನೂ ರಹಸ್ಯವಾಗಿ ಸಿದ್ಧಪಡಿಸಿ, ಚಂದ್ರಲೇಖೆಯು ಅಲ್ಲಿದ್ದ ಕಾವಲು
ಗಾರರನ್ನು ಲಂಚದಿಂದ ತನ್ನಂತೆ ತಿರುಗಿಸಿಕೊಂಡು ವಿಜಯನನ್ನು
ಕರೆದುಕೊಂಡು ಅಂತಃಪುರಕ್ಕೆ ಹೋದಳು. ವಿಜಯನು ರಹಸ್ಯ
ವಾಗಿ ಸರೋಜನಿಯ ಮನೆಯನ್ನು ಸೇರಿ, ಆಕೆಗೆ ನಡೆದ ವೃತ್ತಾಂತ
ವೆಲ್ಲವನ್ನೂ ತಿಳಿಸಿ, ಮಾರನೆಯ ದಿನ ಉಷಃಕಾಲಕ್ಕೆ ತಾನು ರಾಜ
ಕುಮಾರಿಯೊಡನೆ ಪ್ರಯಾಣಮಾಡುವುದಾಗಿ ತಿಳಿಸಿದನು. ಅರ್ಧರಾತ್ರಿ
ಯಾದಮೇಲೆ ಚಂದ್ರಲೇಖೆಯು ಮಾಧುರಿಯ ಸಹಾಯದಿಂದ ಪುರುಷ
ವೇಷವನ್ನು ಧರಿಸಿ, ರತ್ನಬಾಣವನ್ನೂ ತನ್ನ ಯಕ್ಷಿಣೀ ವಸ್ತುಗಳನ್ನೂ
ತೆಗೆದುಕೊಂಡು ಮೊದಲೇ ನಿಶ್ಚಿತವಾಗಿದ್ದಂತೆ ರಹಸ್ಯವಾಗಿ ಸರೋಜಿನಿಯ
ಮನೆಗೆ ಬಂದು ನಿಂತಳು. ರಾಜಕುಮಾರನೂ, ಚಂದ್ರಲೇಖೆಯೂ ಸಹ
ಸರೋಜಿನಿಯು ತಮಗೆ ಮಾಡಿದ ಸಹಾಯಕ್ಕಾಗಿ ಆಕೆಗೆ ಆಭರಣಗಳನ್ನೂ
ಧನವನ್ನೂ ಬಹುಮಾನವಾಗಿ ಕೊಟ್ಟು ಮರುದಿನ ಉಷಃಕಾಲಕ್ಕೆ ಕಾಮ
ಗಾಮಿಯಾದ ಅಶ್ವವನ್ನೇರಿ ಪ್ರಯಾಣಮಾಡಿದರು. ಮಾಧುರಿಯು
ಅರಮನೆಗೆ ಬಂದು ಏನೂ ತಿಳಿಯದವಳಂತೆ ಇದ್ದಳು.

ಬೆಳಗಾದಮೇಲೆ ಅಗ್ನಿಶಿಖ ರಾಕ್ಷಸೇಂದ್ರನು ದೇವಿಯ ದರ್ಶನ
ಮಾಡಿಕೊಂಡು ಸುವರ್ಣಾದ್ರಿಯಿಂದ ಹೊರಟು ಅರಮನೆಗೆ ಬಂದು,
ಪದ್ಧತಿಯಂತೆ ಪುತ್ರಿಯಾದ ಚಂದ್ರಲೇಖೆಯನ್ನು ಕೂಗಲು, ಆಕೆಯಿರಲಿಲ್ಲ.
ಬಹಳ ಹೊತ್ತಾದರೂ ಬರಲಿಲ್ಲ; ಎಲ್ಲೆಲ್ಲಿ ಹುಡುಕಿದರೂ ಸಿಕ್ಕಲಿಲ್ಲ. ಇಷ್ಟು
ಹೊತ್ತಿಗೆ ವಿಜಯನು ಹಿಂದಿನ ದಿನ ನಡೆಯಿಸಿದ ರಾಕ್ಷಸವಧೆಯ ಅನರ್ಥವೂ
ಸಹ ಅಗ್ನಿಶಿಖನಿಗೆ ತಿಳಿಯಬಂತು. ಇದೆಲ್ಲವನ್ನೂ ಕೇಳಿದಕೂಡಲೇ ಪ್ರಳಯ

ಕಾಲ ರುದ್ರನಂತೆ ಕೆರಳಿ, ಅಗ್ನಿಶಿಖನು ಅಗ್ನಿನೇತ್ರನಾಗಿ ದಿಕ್ತಟಗಳೊಡೆಯು ವಂತೆ ಆರ್ಭಟಿಸಿ, ಆ ನೀಚನಾದ ವಿಜಯನೇ ತನ್ನ ಪುತ್ರಿಯನ್ನೂ ಅಪಹರಿಸಿ ಕೊಂಡು ಹೋಗಿರುವನೆಂದು ನಿರ್ಧರಿಸಿ, ದ್ರೋಹಿಗಳಾದ ಅವರಿಬ್ಬರನ್ನೂ ಎಲ್ಲಿದ್ದರೂ ಹುಡುಕಿ ಹಿಡಿದು ತಂದು ತಕ್ಕ ಶಿಕ್ಷೆಯನ್ನು ಮಾಡಲೇ ಮಾಡುವೆನೆಂದು ಶಪಥಮಾಡಿಕೊಂಡು ದಿಕ್ಕುದಿಕ್ಕುಗಳಿಗೂ ಭಟರನ್ನು ಕಳುಹಿಸಿ, ತಾನೂ ಸಹ ಅಶ್ವಾರೂಢನಾಗಿ ಉತ್ತರದಿಕ್ಕನ್ನು ಕುರಿತು ಆ ವಿಜಯನ ತಂದೆಯ ರಾಜಧಾನಿಯಾದ ವೇದವತೀ ನಗರದ ಮಾರ್ಗವನ್ನು ಹಿಡಿದು ಹೊರಟನು.

ವಿಜಯನೂ ಚಂದ್ರಲೇಖೆಯೂ ವೇಗವಾಗಿ ಪ್ರಯಾಣಮಾಡುತ್ತ ದಾಹವಾಗಲು, ಮಾರ್ಗದಲ್ಲಿದ್ದ ಒಂದು ಸರೋವರದಲ್ಲಿ ಜಲಪಾನಮಾಡು ವುದಕ್ಕಾಗಿ ಇಳಿದು ಕುದುರೆಯನ್ನೊಂದು ಮರಕ್ಕೆ ಕಟ್ಟಿ ನೀರಿನ ಬಳಿಗೆ ಹೋಗುತ್ತಿದ್ದರು. ಅಷ್ಟರಲ್ಲಿ, ದೂರದಿಂದ ಕುದುರೆಯ ಹೆಜ್ಜೆಗಳ ಸಪ್ಪಳವು ಕೇಳಿ ಬಂದಿತು. ಪ್ರತಿಕ್ಷಣವೂ, ಅಗ್ನಿಶಿಖನ ಕಡೆಯವರು ತಮ್ಮನ್ನು ಹುಡುಕಿಕೊಂಡು ಬರುವರೆಂಬ ಭಯದಿಂದಿದ್ದ ವಿಜಯನಿಗೆ ದೂರದಲ್ಲಿ ಅಶ್ವಾರೂಢನಾಗಿ ಬರುತ್ತಿದ್ದ ಒಂದು ಘೋರಾಕಾರವು ಗೋಚರವಾ ಯಿತು. ಚಂದ್ರಲೇಖೆಗೆ ಈ ವಿಷಯವನ್ನು ಹೇಳಲು ಅವಳು ದೂರದಿಂದಲೇ, ಅಗ್ನಿಶಿಖನು ಬರುತ್ತಿರುವನೆಂದು ಗುರುತಿಸಿದಳು. ವಿಜಯನು ಭಯದಿಂದ ನಡುಕುತ್ತ ನಿಂತನು. ಚತುರೆಯಾದ ಚಂದ್ರಲೇಖೆಯು ಹೆದರಬೇಡ ವೆಂದು ಅವನಿಗೆ ಧೈರ್ಯವನ್ನು ಹೇಳಿ, ತನ್ನ ಮಂತ್ರಶಕ್ತಿಯಿಂದ ಕುದುರೆ ಯನ್ನು ಒಂದು ಬೇಟೆಯ ನಾಯಿಯನ್ನಾಗಿ ಮಾಡಿ ವಿಜಯನನ್ನೊಬ್ಬ ಕಾಡುಬೇಡರವನಂತೆ ಮಾರ್ಪಡಿಸಿ, ತಾನೊಬ್ಬ ಬೇಡಿತಿಯಾಗಿ ನಿಂತು ಅವನೊಡನೆ ಮಾತನಾಡುತ್ತಿದ್ದಳು. ಈವರೆಗೆ ಅಗ್ನಿಶಿಖನು ಸಮೀಪಕ್ಕೆ ಬಂದು ಇವರನ್ನು ನೋಡಿ ನಿಜಾಂಶವನ್ನರಿಯದೆ, "ಎಲೈ ನೀವು ಯಾರು? ಇಲ್ಲಿ ಏನು ಮಾಡುತ್ತಿರುವಿರಿ?" ಎಂದು ಪ್ರಶ್ನೆಮಾಡಿದನು. ತಮ್ಮ

ನಿಜಾಂಶವು ಎಲ್ಲಿ ಬಯಲಾಗುವುದೋ ಎಂದು ವಿಜಯನ ಎದೆಯು ಡವಡವನೆ ಬಡಿದುಕೊಳ್ಳುತ್ತಿತ್ತು. ಆಗ ಮಾಯಾ ಕಿರಾತಿಯು ರಾಕ್ಷಸನನ್ನು ನೋಡಿ ಧೈರ್ಯದಿಂದ, "ಸ್ವಾಮಿ, ನಾವು ಅಲ್ಲಿ ಕಾಣುವ ಬೆಟ್ಟದ ಪ್ರಾಂತದಲ್ಲಿ ವಾಸಿಸುವ ಕಿರಾತರು; ಸೌದೆಯನ್ನಾರಿಸಿಕೊಂಡು ಹೋಗಲು ಇಲ್ಲಿಗೆ ಬಂದೆವು ತಾವು ಯಾರು?" ಎಂದಳು. ಆಗ ಅಗ್ನಿಶಿಖನು ಕುದುರೆಯನ್ನಿಳಿದು, "ನನ್ನ ವಿಚಾರವು ಹಾಗಿರಲಿ, ಈ ಕಡೆ ಯಾವನಾದರೂ ರಾಜಕುಮಾರನು ಒಬ್ಬ ಕನ್ಯೆಯೊಡನೆ ಹೋದುದನ್ನು ನೀವು ನೋಡಿದಿರಾ? ಅದನ್ನು ತಿಳಿಸಿ" ಎಂದು ಕೇಳಿದನು. ಅದಕ್ಕೆ ಆ ಕಿರಾತಿಯು, "ಅಹುದು ಸ್ವಾಮಿ, ಈಗ ಸ್ವಲ್ಪ ಹೊತ್ತಿನ ಮುಂಚೆ ಒಬ್ಬ ಸುಂದರನಾದ ತರುಣನು ಒಂದು ಹೆಣ್ಣನ್ನು ಕುದುರೆಯ ಮೇಲೆ ಕುಳ್ಳಿರಿಸಿಕೊಂಡು, ತಾವು ಬಂದ ಮಾರ್ಗದಿಂದಲೇ ಬಂದು ಇದೇ ಸರೋವರದಲ್ಲಿ ಜಲಪಾನಮಾಡಿ ಈ ಕಡೆ ಪೂರ್ವದಿಕ್ಕಿಗೆ ಪ್ರಯಾಣಮಾಡಿದರು. ನಾವು ದೂರದಲ್ಲಿದ್ದುದರಿಂದ ಅವರೊಡನೆ ಮಾತನಾಡಲು ಸಂಧಿಸಲಿಲ್ಲ" ಎಂದಳು. ಆಗ ಅವನೇ ವಿಜಯನು, ಅವಳೇ ಚಂದ್ರಲೇಖೆಯು, ಎಂದು ಅಗ್ನಿಶಿಖನು ಮನಸ್ಸಿನಲ್ಲಿ ಸ್ಥಿರಮಾಡಿಕೊಂಡು ಆ ಕಿರಾತಿಯು ತೋರಿಸಿದ ಅರಣ್ಯಪ್ರಾಂತವನ್ನು ಕುರಿತು ಆತುರದಿಂದ ಪ್ರಯಾಣಮಾಡಿದನು.

ಸದ್ಯಕ್ಕೆ ವಿಪತ್ತಿನಿಂದ ಪಾರಾದೆವೆಂದು ಸಂತೋಷಪಡುತ್ತಲೂ ತಾವು ಅಗ್ನಿಶಿಖನಿಗೆ ತಕ್ಕ ಮೋಸಮಾಡಿದೆವೆಂದು ನಗುತ್ತಲೂ ಅವರಿಬ್ಬರೂ, ಆ ರಾಕ್ಷಸನು ಹೋದ ಮಾರ್ಗವನ್ನೇ ನೋಡುತ್ತಿದ್ದು ಅವನು ಕಣ್ಮರೆಯಾದಮೇಲೆ ತಮ್ಮ ನಿಜರೂಪಗಳನ್ನು ಧರಿಸಿ, ನಾಯಿಯನ್ನು ಮತ್ತೆ ಕುದುರೆಯನ್ನಾಗಿ ಮಾಡಿ, ಅದನ್ನೇರಿ ವೇದವತೀ ನಗರವನ್ನು ಕುರಿತು ಪ್ರಯಾಣಮಾಡಿದರು.

---

# ಅಷ್ಟಮ ತರಂಗ

---

ಈಕಡೆ ವೇದವತೀ ನಗರದಲ್ಲಿ ಕಾರಾಗೃಹದಲ್ಲಿದ್ದ ಶೀಲವತೀ ದೇವಿಗೆ ವಿಜಯನ ಪ್ರತಿಜ್ಞೆ ಮತ್ತು ಪ್ರಯಾಣಗಳ ವಿಚಾರವು ಕಾವಲು ಗಾರರಿಂದ ತಿಳಿದಿತ್ತು. ಆಕೆಯು, ತನ್ನ ಸುಕುಮಾರನು ಕ್ಷಿಪ್ರದಲ್ಲಿ ವಿಜಯಶಾಲಿಯಾಗಿ ಬಂದು ಸತ್ಯಧರ್ಮಗಳನ್ನುದ್ಧರಿಸಿ ತನ್ನನ್ನು ಮೃತ್ಯುವಿ ನಿಂದಲೂ ನಿರ್ಬಂಧದಿಂದಲೂ ಬಿಡಿಸುವಂತೆ ಅನುಗ್ರಹಿಸಬೇಕೆಂದು ಸದಾ ಕಾಲದಲ್ಲಿಯೂ ತಮ್ಮ ಕುಲದೇವತೆಯಾದ ಅಂಬಿಕೆಯನ್ನು ಪ್ರಾರ್ಥಿ ಸುತ್ತ ವಿಜಯಕುಮಾರನ ಸುಖಾಗಮನವನ್ನೇ ಎದುರುನೋಡುತ್ತಿದ್ದಳು. ಸೌದಾಮಿನಿ ಕಾದಂಬಿನಿಯರಾದರೋ ವಿಜಯನು ಹಿಂದಿರುಗದೆ ಹಾಗೆಯೇ ಹಾಳಾಗಿಹೋಗಲೆಂದು ಪ್ರತಿಕ್ಷಣದಲ್ಲಿಯೂ ಅವನಿಗೆ ಅಮಂಗಳವನ್ನೇ ಬಯಸುತ್ತಿದ್ದರು. ಆದರೆ ತಾವು ಎಷ್ಟು ಉಪಾಯಗಳನ್ನು ಮಾಡಿ ರಾಜ ನೊಡನೆ ಎಷ್ಟು ಬೇಳುವೆಯ ಮಾತುಗಳನ್ನಾಡಿದರೂ ಕಾರಾಗೃಹದಲ್ಲಿ ಪುರುಷವೇಷದಿಂದಿದ್ದ ಸರಸಾಂಗಿಗೆ ಮಾತ್ರ ಬಂಧವಿಮೋಚನೆ ಮಾಡಲು ಸಾಧ್ಯವಾಗಲಿಲ್ಲ. ಅಲ್ಲಿನ ಕಾವಲುಗಾರರಿಗೆ ಲಂಚವನ್ನು ಕೊಟ್ಟು ತಾವು ಕಿಟಕಿಯಿಂದ ರಹಸ್ಯವಾಗಿ ಅವಳೊಡನೆ ಮಾತನಾಡುವುದಕ್ಕೆ ಅವಕಾಶ ಮಾಡಿಕೊಂಡು ಅವಳಿಗೆ ವಿಧವಿಧವಾದ ಫಲ ಭಕ್ಷ್ಯಾದಿಗಳನ್ನು ತಂದು ಕೊಡುತ್ತ ಧೈರ್ಯಗೆಡಬೇಡವೆಂದು ಪ್ರೋತ್ಸಾಹಿಸುತ್ತ ಇದ್ದುದಲ್ಲದೆ, ವಿಚಾರಣೆಯ ಸಮಯದಲ್ಲಿ ಶೀಲವತಿಯು ತನ್ನಲ್ಲಿ ಅನುರಕ್ತಳಾಗಿದ್ದ ಳೆಂದು ರಾಜನೊಡನೆ ಹೇಳುವಂತೆ ಪದೇ ಪದೇ ಒತ್ತಿ ಹೇಳಿ ಕೊಟ್ಟು ಬೆನ್ನು ತಟ್ಟುತ್ತಿದ್ದರು. ಆದರೆ ಅವಳನ್ನು ಮುಂದೆ ರಾಜದಂಡನೆಯಿಂದ ಪಾರುಮಾಡುವುದಕ್ಕೆ ತಕ್ಕ ಉಪಾಯವೇ ಇವರಿಗೆ ಹೊಳೆಯಲಿಲ್ಲ. ಏತ ಕ್ಕೆಂದರೆ, ಕಾರಾಗೃಹದ ಬೀಗದ ಕೈಗಳನ್ನು ರಾಜನು ಮಂತ್ರಿಯಾದ

ಧುರಂಧರನ ವಶಕ್ಕೆ ಕೊಟ್ಟು ಆತನ ಮೂಲಕವೇ ಅಪರಾಧಿಗಳಿಗೆ ಆಹಾರಾದಿಗಳನ್ನು ಕೊಡಿಸುವಂತೆ ಏರ್ಪಡಿಸಿದ್ದನು. ಇದರಿಂದ ಅವಳನ್ನು ಬಿಡುಗಡೆ ಮಾಡಲು ಈ ಠಕ್ಕುಮಾರಿಯರು ಮಾಡಿದ ತಂತ್ರಗಳೆಲ್ಲವೂ ವ್ಯರ್ಥವಾದವು.

ಭಾನುತೇಜ ರಾಜಹಂಸರು ಮಾತ್ರ ವಿಜಯನಿಗೆ ರತ್ನಬಾಣವು ದೊರೆಯುವುದು ಅಸಾಧ್ಯವೆಂತಲೂ, ಇನ್ನು ರಾಜ್ಯಪಟ್ಟಾಭಿಷೇಕವೂ ವಿದ್ಯಾಧರಿಯ ಪಾಣಿಗ್ರಹಣವೂ ತಮಗೇ ಸ್ಥಿರವಾಯಿತೆಂತಲೂ ಸಂತೋಷಪಡುತ್ತಿದ್ದರು; ಆದರೆ ಇವರಲ್ಲಿ ಪ್ರತಿಯೊಬ್ಬನೂ ಮತ್ತೊಬ್ಬನಿಗೆ ಮೋಸಮಾಡಿ ತಾನೇ ವಿದ್ಯಾಧರಿಯ ಮನಸ್ಸನ್ನು ತನ್ನಂತೆ ತಿರುಗಿಸಿಕೊಂಡು ಅವಳನ್ನು ವಿವಾಹ ಮಾಡಿಕೊಳ್ಳಬೇಕೆಂದು ಅಂತರ್ಯದಲ್ಲಿ ವಿಧವಿಧವಾದ ಉಪಾಯಗಳನ್ನಾಲೋಚಿಸುತ್ತಿದ್ದರು. ಮತ್ತೆ ಆಗಾಗ ರಹಸ್ಯವಾಗಿ ವಿದ್ಯಾಧರಿಯನ್ನು ಕೆಣಕಿ ಅವಮಾನಪಟ್ಟು ಬರುತ್ತಿದ್ದರು.

ವಿದ್ಯಾಧರಿಯ ಮನಸ್ಸು ಮಾತ್ರ ವಿಜಯನಲ್ಲಿಯೇ ಲೀನವಾಗಿ, ಅವಳು ಸದಾ ವಿಜಯನ ವಿಜಯವನ್ನೇ ಬಯಸಿ ಅವನ ಸುಖಾಗಮನಕ್ಕಾಗಿ ತ್ರಿಕಾಲದಲ್ಲಿಯೂ ಸರ್ವಮಂಗಳೆಯನ್ನಾರಾಧಿಸುತ್ತಿದ್ದಳು. ಇವಳ ತಂದೆಯಾದ ಧುರಂಧರನಿಗೂ, ವಿಜಯನು ಮಹಾಪರಾಕ್ರಮಿಯೆಂಬ ನಂಬಿಕೆಯಿದ್ದುದರಿಂದಲೂ, ಅವನು ಯತ್ನಿಸಿದ ಕಾರ್ಯಗಳಲ್ಲಿ ತಪ್ಪದೆ ಜಯವನ್ನು ಪಡೆದುಬರುವನೆಂದು ದೈವಜ್ಞರು ಅವನ ಜಾತಕರೀತಿಯನ್ನು ನೋಡಿ ಹೇಳಿದ್ದುದರಿಂದಲೂ, ಅವನು ಅವಧಿಯೊಳಗಾಗಿ ಕಾರ್ಯವನ್ನು ಸಾಧಿಸಿಕೊಂಡು ಬಂದೇ ಬರುವನೆಂಬ ನಂಬಿಕೆಯು ಬಹಳವಾಗಿತ್ತು.

ಚಂದ್ರಸೇನರಾಜನಿಗಾದರೋ, ವಿವೇಕಿಯೂ ಯುಕ್ತಿಚಾತುರ್ಯಗಳಿಂದೊಪ್ಪುವ ಪರಾಕ್ರಮಶಾಲಿಯೂ ಆದ ವಿಜಯನ ನಿಜಸ್ಥಿತಿಯು ಮನಸ್ಸಿಗೆ ಬಾರದೆ ಇದ್ದುದರಿಂದಲೂ, ಶೀಲವತಿಯು ದುರ್ಮಾರ್ಗಗಾಮಿನಿಯಾದಳೆಂಬ ವ್ಯಥೆಯಿಂದಲೂ ಸಹ ಆತನು ವಿಜಯನ ಆಗಮನದ

ವಿಷಯದಲ್ಲಿ ಉದಾಸೀನನಾಗಿಯೇ ಇದ್ದನು. ಹದಿನಾಲ್ಕು ದಿನಗಳನಂತರ ಶೀಲವತಿಯ ಶಿರಚ್ಛೇದನವನ್ನು ಮಾಡಿಸಿ, ಅಂತಃಪುರ ಪ್ರವೇಶ ಮಾಡಿದ್ದ ಅಪರಾಧಿಯಾದ ಪುರುಷನ ವಿಚಾರಣೆಯನ್ನು ನಡೆಯಿಸಿ ಅವನಿಗೂ ತಕ್ಕ ಶಿಕ್ಷೆಯನ್ನು ವಿಧಿಸುವಾತುರದಲ್ಲಿಯೇ ಇದ್ದನು.

ಈ ವರೆಗೆ ಹದಿಮೂರು ದಿನಗಳು ಕಳೆದವು. ವಿಜಯನು ಇನ್ನು ಜಯಶಾಲಿಯಾಗಿ ಬರುವುದಿಲ್ಲವೆಂಬುದೇ ಎಲ್ಲರ ಮನಸ್ಸಿನಲ್ಲಿಯೂ ನಿರ್ಧರವಾಯಿತು. ಸ್ವಕಾರ್ಯ ಧುರಂಧರೆಯರಾದ ಕಾದಂಬಿನಿ ಸೌದಾಮಿನಿಯರು ರಾಜನನ್ನು ಪ್ರೋತ್ಸಾಹಿಸಿ, ಭಾನುತೇಜನಿಗೆ ರಾಜ್ಯಪಟ್ಟಾಧಿಕಾರವನ್ನು ಕೊಡಲು ನಿರ್ಧರಿಸುವಂತೆಯೂ, ರಾಜಹಂಸನಿಗೆ ವಿದ್ಯಾಧರಿಯನ್ನು ತಂದು ಕ್ಷಿಪ್ರದಲ್ಲಿ ವಿವಾಹಮಾಡುವಂತೆಯೂ ಕೇಳಿಕೊಂಡರು. ಅವಧಿಯೊಳಗೆ ವಿಜಯನು ಬಾರದಿದ್ದರೆ ಅದರಂತೆಯೇ ಮಾಡುವೆನೆಂದು ರಾಜನು ವಾಗ್ದಾನ ಮಾಡಿದನು. ಮಾರನೆಯ ದಿನವೇ ಮಂತ್ರಿಯೊಡನೆ ಮಾತನಾಡಿ ವಿದ್ಯಾಧರಿಯನ್ನು ರಾಜಹಂಸನಿಗೆ ಕೊಡಲು ಆತನನ್ನು ಒಪ್ಪಿಸಿ ಲಗ್ನನಿಶ್ಚಯಮಾಡಬೇಕೆಂದು ನಿರ್ಧರಮಾಡಿಕೊಂಡರು. ಮಾರನೆಯ ದಿನ ಮಧ್ಯಾಹ್ನ ಹನ್ನೆರಡು ಘಂಟೆಯಾಯಿತು. ವಿಜಯನು ಬರಲಿಲ್ಲ. ಅವನು ಎಲ್ಲಿಯೋ ಕಾಡುಮೃಗಗಳ ಪಾಲಾದನೋ ಅಥವಾ ಕಾರ್ಯವನ್ನು ಸಾಧಿಸಲಾರದೆ ಅವಮಾನದಿಂದ ಮತ್ತೆ ಹಿಂದಿರುಗಿದರೆ ಅನರ್ಥವಾಗುವುದೆಂದು ದೇಶಭ್ರಷ್ಟನಾಗಿ ಹೋದನೋ, ಎಂದು ತರ್ಕಿಸಿ ರಾಜನೂ ಸೌದಾಮಿನಿ ಕಾದಂಬಿನಿಯರೂ ಸಹ ಭೋಜನವಾದನಂತರ ಮಂತ್ರಿಯಾದ ಧುರಂಧರನನ್ನು ಕರೆಯಿಸಿ ವಿವಾಹ ವಿಚಾರವಾಗಿ ಪ್ರಸ್ತಾಪಿಸಿದರು. ಮತಿವಂತನಾದ ಧುರಂಧರನು, ರಾಜನನ್ನು ನೋಡಿ "ರಾಜೇಂದ್ರಾ, ಈ ಸೇವಕನ ವಿಜ್ಞಾಪನೆಯನ್ನು ಶಾಂತಮನಸ್ಕರಾಗಿ, ಲಾಲಿಸಬೇಕು, ವಿಜಯಕುಮಾರನಿಗೆ ನಿಶ್ಚಿತಳಾಗಿರುವ ಕನ್ಯೆಯನ್ನು, ವಿಜಯನು ಪ್ರಾಣದಿಂದಿರುವವರೆಗೂ ಮತ್ತೊಬ್ಬರಿಗೆ ಕೊಡಲು ನಿಶ್ಚಯಿ

ಸುವುದು ಉಚಿತವೆಂದು ನನಗೆ ತೋರುವುದಿಲ್ಲ. ಅಲ್ಲದೆ ಆತನು ಹಿಂದಿರುಗಿ ಬರಲು ಇನ್ನೂ ಈ ದಿನ ಸೂರ್ಯಾಸ್ತಮಯ ಸಮಯದವರೆಗೂ ಅವಧಿ ಯಿರುವುದು. ಆತನು ಜಯಶಾಲಿಯಾಗಿ ಬಂದರೆ ಬೇರೆ ಆಲೋಚನೆ ಯನ್ನೇ ಮಾಡಬೇಕಾಗುವುದಿಲ್ಲ. ಬಾರದಿದ್ದರೆ, ಅಥವಾ ಕಾರ್ಯವನ್ನು ಸಾಧಿಸದೆ ಬಂದರೆ, ನಾಳಿನ ದಿನ ಕಾರಾಗೃಹದಲ್ಲಿರುವ ರಾಜ್ಞಿಯವರ ಅಪರಾಧ ವಿಚಾರಣೆಯು ನಡೆಯಬೇಕಾಗುವುದು. ಅವರ ಪರಿಣಾಮವು ಮಂಗಳಕರವಾಗುವುದೋ ಅಥವಾ ಅನ್ಯಥಾ ಆಗುವುದೋ ತಿಳಿಯದು; ಇಂತಹ ಸಂಧಿಕಾಲದಲ್ಲಿ ವಿದ್ಯಾಧರಿಯ ವಿವಾಹ ನಿಶ್ಚಯವು ಸಮ ಯೋಚಿತವೆಂದು ನನ್ನ ಮನಸ್ಸಿಗೆ ಕಾಣುವುದಿಲ್ಲ. ಇದು ಕೇವಲ ಸಲಿಗೆ ಯಿಂದಲೂ ಸ್ವಾಮಿಭಕ್ತಿಯಿಂದಲೂ ನಾನು ವಿಜ್ಞಾಪನೆ ಮಾಡಿಕೊಂಡಿ ರುವ ವಿಚಾರವು; ಚಿತ್ತದಲ್ಲಿ ಸಾವಧಾನವಾಗಿ ಆಲೋಚಿಸಿ ಹೇಗೆ ಅಪ್ಪಣೆ ಮಾಡಿದರೆ ಅದರಂತೆ ನಡೆಯಿಸಲು ಸಿದ್ಧನಾಗಿರುವೆನು" ಎಂದನು. ಚಂದ್ರಸೇನರಾಜನಿಗೆ ಮಂತ್ರಿಯ ಮಾತು ವಿವೇಕಯುಕ್ತವಾದುದೆಂದು ತೋರಿತು. ಆದರೂ ಆ ಮಾಯಾಂಗನೆಯರಿಬ್ಬರೂ ತಮ್ಮ ಇಷ್ಟಾರ್ಥ ವನ್ನು ನೆರವೇರಿಸಿಕೊಳ್ಳಬೇಕೆಂಬಾತುರದಿಂದ, ರಾಜನನ್ನು ಕುರಿತು "ಪ್ರಿಯಾ, ನಾಳಿನ ವಿಚಾರವು ಮಂಗಳಕರವೋ ಅಮಂಗಳಕರವೋ ನಮಗೆ ಯಾರಿಗೂ ತಿಳಿಯದು. ಆದರೆ ಪ್ರಕೃತ ಸಂಭವದಲ್ಲಿ ವಿಜಯನು ನಾಳೆ ಬೆಳಗಾಗುವುದರೊಳಗಾಗಿ ರತ್ನಬಾಣವನ್ನು ತರುವುದು ಅಸಾ ಧ್ಯವೇ ಸರಿ. ಆದುದರಿಂದ ಅವನು ಬಾರದಿದ್ದರೆ ವಿದ್ಯಾಧರಿಯನ್ನು ರಾಜಹಂಸನಿಗೆ ಕೊಡುವಂತೆ ಮಂತ್ರಿಯನ್ನೊಪ್ಪಿಸಲೇ ಬೇಕು; ಏತಕ್ಕೆಂದರೆ, ಅನಂತರ ಆತನ ಮನಸ್ಸು ಬೇರೆಯಾದೀತು. ಆದುದರಿಂದ ವಿವಾಹವು ಇನ್ನು ಎಷ್ಟು ದಿನಗಳಿಗಾದರೂ ನಡೆಯಲಿ; ಕನ್ಯಾದಾನದ ವಾಗ್ದಾನವು ಆತನಿಂದ ನಮಗೆ ಲಭಿಸಿದರೆ ಸಾಕು" ಎಂದು ಹಠ ಹಿಡಿದರು. ರಾಜನು ಕಿರಿಯ ಹೆಂಡಿರಮಾತಿಗೆ ಕಿವಿಗೊಟ್ಟು ಹಾಕಿದನು. ಸ್ವಲ್ಪ ಹೊತ್ತು

ಚರ್ಚೆಯು ನಡೆದಮೇಲೆ ಮಂತ್ರಿಯಾದ ಧುರಂಧರನು, "ವಿಜಯನು ಬಾರದೆ ಹೋದರೆ ವಿದ್ಯಾಧರಿಯನ್ನು ರಾಜಹಂಸನಿಗೆ ಕೊಡುವೆನು" ಎಂದು ಒಪ್ಪಿದನು. ವಿಜಯನು ಬಾರದಿದ್ದರೆ ಭಾನುತೇಜನಿಗೆ ಯುವ ರಾಜಪಟ್ಟವನ್ನು ಕಟ್ಟಲು ರಾಜನ ವಾಗ್ದಾನವು ಮೊದಲೇ ಆಗಿರುವುದಷ್ಟೆ! ಆದುದರಿಂದ ಆ ಪೋಸಗಾತಿಯರಿಬ್ಬರೂ ಸಂತೋಷದಿಂದ ನಲಿದು ತಮ್ಮ ಕುಮಾರರಿಬ್ಬರಿಗೂ ಈ ವಿಚಾರಗಳನ್ನು ತಿಳಿಸಿ, ಅವರ ಮನಸ್ಸುಗಳನ್ನು ಸಂತೋಷಪಡಿಸಿ ತಾವೂ ಆನಂದಮಗ್ನರಾದರು.

ಈ ವಿಚಾರವೆಲ್ಲವೂ ವಿದ್ಯಾಧರಿಗೆ ತಂದೆಯ ಮುಖದಿಂದ ತಿಳಿದು ಆಕೆಯ ಮನಸ್ಸು ಬಹಳ ಚಿಂತೆಗೀಡಾಯಿತು. ಕಡೆಗೆ ವಿಜಯನು ಬಾರದಿದ್ದರೆ ವಿವಾಹವಿಲ್ಲದೆಯಾದರೂ ಕಾಲವನ್ನು ಕಳೆಯುವೆನಲ್ಲದೆ ತಾನು ರಾಜಹಂಸನನ್ನು ವರಿಸಲೊಲ್ಲೆನೆಂದು ಆಕೆಯು ತಂದೆಯ ಪಾದಕ್ಕೆರಗಿ ಬಿನ್ನವಿಸಿಕೊಂಡಳು. ಧುರಂಧರನು ದಿಕ್ಕು ತೋರದೆ ಚಿಂತಾಮಗ್ನನಾದನು.

ಇಷ್ಟು ಹೊತ್ತಿಗೆ ಮಧ್ಯಾಹ್ನ ಮೂರು ಘಂಟೆಯಾಯಿತು. ರಾಜಸೇವಕರು ಬಂದು ರಾಜಾಜ್ಞೆಯಾಯಿತೆಂದು ಮಂತ್ರಿಗೆ ತಿಳಿಸಿದರು. ಆ ಕೂಡಲೇ ಮಂತ್ರಿ ಆತನು ಅರಮನೆಗೆ ಬಂದನು. ಆವರೆಗೆ ರಾಜನು, "ಈ ದಿನ ಸಂಧ್ಯಾಕಾಲಕ್ಕೆ ವಿಜಯನ ಅವಧಿಯು ಪೂರಯಿಸುವ ಕಾರಣ ಅಪರಾಧಿನಿಯಾದ ಶೀಲವತಿಯ ವಿಚಾರಣೆಯನ್ನು ನಡೆಯಿಸಿ ಆಕೆಯ ಶಿರಸ್ಸನ್ನು ಛೇದಿಸಲಾಜ್ಞೆ ಮಾಡಬೇಕು" ಎಂದು ನಿರ್ಧರಿಸಿ ಅರಮನೆಯ ಒಳಭಾಗದ ಅಂಗಳದಲ್ಲಿ ಪತ್ನೀಪರಿವಾರಯುಕ್ತನಾಗಿ ಕುಳಿತಿದ್ದನು. ಮಂತ್ರಿಯು ಬಂದೊಡನೆಯೇ ಅಪರಾಧಿನಿಯಾದ ಶೀಲವತಿಯನ್ನು ವಿಚಾರಣೆಗಾಗಿ ಬರಮಾಡಬೇಕೆಂದನು. ಅದರಂತೆ ಧುರಂಧರನು ತಾನೇ ಕಾರಾಗೃಹದ ಬಳಿಗೆ ಹೋಗಿ ಮೊದಲನೆಯ ಅಪರಾಧಿನಿಯಾದ ಶೀಲವತಿಯನ್ನು ರಾಜಸೇವಕರ ಪಹರೆಯಿಂದ ಕರೆದುಕೊಂಡು

ಬಂದು ರಾಜನ ಮುಂದೆ ನಿಲ್ಲಿಸಿದನು. ಮಹಾಪತಿವ್ರತೆಯಾದ ಶೀಲವತೀ ದೇವಿಯು ಕಾರಾಗೃಹದಲ್ಲಿ ಅವಿಚ್ಛಿನ್ನವಾದ ದುಃಖದಿಂದ ಕೃಶಳಾಗಿ ಜೀವಚ್ಛವದಂತೆ ನಿಂತು ಕಂಬನಿಗಳ ಮಳೆಯನ್ನೇ ಸುರಿಸಿದಳು. ಇದನ್ನು ನೋಡಿ ಸೌದಾಮಿನಿ ಕಾದಂಬಿನಿಯರು ಸಂತೋಷದಿಂದ ಉಬ್ಬಿ ಒಬ್ಬರನ್ನೊಬ್ಬರು ನೋಡಿದರು. ರಾಜನಿಗೆ ಮನಸ್ಸು ಕರಗಿದರೂ ಅಪ ಕೀರ್ತಿ ಬಂತೆಂಬ ಕ್ರೋಧವು ಅದನ್ನು ಕಠಿನವಾಗಿ ಮಾಡುತ್ತಿತ್ತು. ಆದುದರಿಂದ ಆಡಿದ ಮಾತನ್ನು ನಡೆಯಿಸಿ ರಾಜಧರ್ಮವನ್ನು ಪಾಲಿ ಸಲೇಬೇಕೆಂದು ಶೀಲವತಿಯನ್ನು ನೋಡಿ, "ಎಲೌ, ದುಶ್ಶೀಲವತೀ! ನಿನ್ನೊಡನೆ ಮಾತನಾಡುವ ಇಷ್ಟವು ನನಗಿಲ್ಲದಿದ್ದರೂ ನಿನ್ನ ಮಗನು ಬಾಣಪ್ರಯೋಗ ಪರೀಕ್ಷೆಯಲ್ಲಿ ಗೆದ್ದವನಾದಕಾರಣ ಅವನಿಗೆ ಕೊಟ್ಟ ವಾಗ್ದಾನವನ್ನುಳಿಸಲು ನಿನ್ನ ವಿಚಾರಣೆಯನ್ನು ಕ್ರಮವಾಗಿ ನಡೆಯಿಸಿ ಅನಂತರ ನಿನಗೆ ಶಿಕ್ಷೆಯನ್ನು ವಿಧಿಸಬೇಕೆಂದಿದ್ದೆನು. ಆದರೆ ಆ ದ್ರೋಹಿಯು ನನ್ನ ರತ್ನಬಾಣವನ್ನು ಕದ್ದು, ಅದನ್ನು ಕಳೆದು ಮತ್ತೆ ತರುವೆನೆಂದು ಹೋದವನು ಅವಧಿಯಲ್ಲಿ ಹಿಂದಿರುಗಲಿಲ್ಲವಾದಕಾರಣ ಅವನಿಗೆ ನಾನು ಹೇಳಿದ್ದಂತೆ ನಿನ್ನನ್ನು ಈಗ ಮರಣದಂಡನೆಗೆ ಗುರಿಮಾಡಿರುವೆನು. ಅವ ನಿಂದ ನಿನ್ನ ಆಯುಸ್ಸು ಹದಿನಾಲ್ಕು ದಿನಗಳು ಹೆಚ್ಚಿತ್ತು. ಇನ್ನು ಮೃತ್ಯುವಿಗೆ ತುತ್ತಾಗು ಹೊರಡು" ಎಂದು ಹೇಳಿ ಬಳಿಯಲ್ಲಿದ್ದ ವಧಕರ ವಶಕ್ಕೆ ರಾಣಿಯನ್ನು ಒಪ್ಪಿಸಿದನು.

ಪ್ರತ್ಯಕ್ಷ ಮೃತ್ಯುಗಳಂತಿದ್ದ ಆ ವಧಕರು ಘೋರಾಯುಧಗಳನ್ನು ಧರಿಸಿ ಆಕೆಯ ಬಳಿಗೆ ಬಂದು ಹೊರಡುವಂತೆ ಗರ್ಜಿಸಿದರು. ಪತಿಯ ಕಡೆಯ ದರ್ಶನವನ್ನು ಮಾಡಿ ಬರುವೆನೆಂದು ಅವರನ್ನು ಕೇಳಿಕೊಂಡು ಶೀಲವತಿಯು ದೀನದೃಷ್ಟಿಗಳಿಂದ ರಾಜನನ್ನು ನೋಡಿ, "ಪ್ರಿಯಾ ಹೋಗಿಬರುವೆನು" ಎನ್ನುವಷ್ಟರಲ್ಲಿ ಸುತ್ತಲಿದ್ದ ಜನಜಾಲವೆಲ್ಲವೂ 'ಗೊಳ್ಳೆಂದು ಅತ್ತಿತು. ಆದರೂ ಮೃತ್ಯುವಿಗೆ ಕರುಣವೆಲ್ಲಿಯದು! ವಧಕರು

ಗರ್ಜಿಸಿ ಆಕೆಯನ್ನು ಮುಂದೆ ಹೊರಡಲು ಬಲಾತ್ಕರಿಸಿದರು. ಶೀಲವತಿಯು ನಾಲ್ಕು ಹೆಜ್ಜೆಗಳನ್ನು ಮುಂದಿಟ್ಟಳು.

"ನಿಲ್ಲಿ ನಿಲ್ಲಿ! ವಧಕರೇ ನಿಲ್ಲಿ!" ಎಂಬ ಗಟ್ಟಿಯಾದ ಶಬ್ದವೂ ಕುದುರೆಯ ಕಾಲುಗಳ ಸಪ್ಪಳವೂ ಆಕಸ್ಮಿಕವಾಗಿ ಕೇಳಿ ಬಂತು. ಎಲ್ಲರೂ ಭ್ರಾಂತರಾಗಿ ನೋಡುತ್ತಿರುವಷ್ಟರಲ್ಲಿ ದಿವ್ಯಾಶ್ವದಮೇಲೆ ಸುಂದರೀಮಣಿಯೊಡನೆ ವೀರತರುಣನೊಬ್ಬನು ರತ್ನಬಾಣಹಸ್ತನಾಗಿ ಬಂದು ಅಶ್ವವನ್ನಿಳಿದು ರಾಜನಿಗೆ ನಮಸ್ಕರಿಸಿ, ಶರವನ್ನು ಆತನಿಗೆ ಒಪ್ಪಿಸಿದನು. ರಾಜನೂ ರಾಣಿಯರೂ ಮಂತ್ರಿಯೂ ಪರಮಾಶ್ಚರ್ಯದಿಂದ ದೃಷ್ಟಿಸಿ ನೋಡಲು, ಅವನು ವೀರಶಿಖಾಮಣಿಯಾದ ವಿಜಯಕುಮಾರನಾಗಿದ್ದನು. ರಾಜನಿಗೆ ಅತ್ಯಾನಂದವಾಯಿತು. ಇನ್ನು ಕಾರ್ಯವು ಮೀರುವುದೆಂದು ವಿಜಯನು ತಂದೆಯನ್ನು ನೋಡಿ, "ಜನಕಾ! ನನ್ನ ಪ್ರತಿಜ್ಞೆಯನ್ನು ನಾನು ನಡೆಯಿಸಿರುವೆನು. ನೀನು ನಿನ್ನ ವಾಗ್ದಾನವನ್ನು ಪಾಲಿಸಬೇಕು. ನಮ್ಮ ತಾಯಿಯ ವಿಚಾರಣೆಯು ಈ ಸಭೆಯಲ್ಲಿ ನಡೆದನಂತರ ನ್ಯಾಯ ವರಿತು ಆಕೆಗೆ ಶಿಕ್ಷೆಯನ್ನು ವಿಧಿಸಬೇಕು" ಎಂದು ಮತ್ತೆ ನಮಸ್ಕರಿಸಿ ಬೇಡಿಕೊಂಡನು. ರಾಜನು ನಿಜವೆಂದು ಆ ಕೂಡಲೇ ವಧಕರ ವಶಕ್ಕೆ ಒಪ್ಪಿಸಿದ್ದ ಶೀಲವತೀ ದೇವಿಯನ್ನು ಮತ್ತೆ ತನ್ನ ಸನ್ನಿಧಿಗೆ ಕರೆತರುವಂತೆ ಆಜ್ಞೆಮಾಡಲು, ಮಂತ್ರಿಯು ಅದರಂತೆಯೇ ಆಕೆಯನ್ನು ಕರೆಯಿಸಿದನು. ವಿಜಯಕುಮಾರನ ಮುಖವನ್ನು ನೋಡಿದ ಶೀಲವತಿಗೆ, ಹೋಗಿದ್ದ ಪ್ರಾಣವು ಬಂದಂತಾಯಿತು. ಆಗ ತನ್ನ ಮನಸ್ಸಿನಲ್ಲಿ ಅಂಬಿಕೆಗೆ ಮತ್ತೆ ವಂದಿಸಿ ನಿಂತಳು. ರಾಜನು ವಿಜಯನನ್ನು ಪಕ್ಕದಲ್ಲಿ ಕುಳ್ಳಿರಿಸಿಕೊಂಡು ಶೀಲವತಿಯನ್ನು ನೋಡಿ, "ಎಲೌ ಶೀಲವತೀ, ನಿನ್ನ ಕುಮಾರನು ವಿಜಯಶಾಲಿಯಾಗಿ ಬಂದು ನಿನಗೆ ನನ್ನೊಡನೆ ಹೆಚ್ಚಾಗಿ ಮಾತನಾಡಲು ಅವಕಾಶವನ್ನು ಕೊಟ್ಟಿರುವನು. ಆದುದರಿಂದ ನಿನ್ನ ಅಪರಾಧವನ್ನು ಈಗ ವಿವರಿಸಿ ಹೇಳುವೆನು. ಅದಕ್ಕೆ ನೀನು ನಿನ್ನ ಆತ್ಮರಕ್ಷಣೆಗಾಗಿ ಏನಾ

ದರೂ ಹೇಳುವುದಿದ್ದರೆ ತಿಳಿಸು" ಎಂದು ಹೇಳಿ ಭಗವದ್ಗೀತೆಯ ಪುಸ್ತಕ ವನ್ನಾಕೆಯ ಕೈಗೆ ಕೊಡಿಸಿ, "ಇದನ್ನು ತಲೆಯಮೇಲೆ ಹೊತ್ತು ಸತ್ಯ ವನ್ನು ಹೇಳು, ನೀನು ಪರಪುರುಷನ ಸ್ನೇಹಮಾಡಿದಂತೆ ನನ್ನ ಕಣ್ಣಿಗೆ ಗೋಚರವಾಗಿರುವುದು. ಇಂತಹ ಅಪರಾಧವನ್ನು ನೀನು ಏತಕ್ಕೆ ಮಾಡಿದೆ? ನಿನ್ನ ಪತಿಯಲ್ಲಿ ಯಾವ ದೋಷವನ್ನು ಕಂಡು ನೀನು ಅನ್ಯಪುರುಷನಲ್ಲಿ ಅನುರಕ್ತಳಾದೆ? ತಿಳಿಸು" ಎಂದು ಪ್ರಶ್ನೆಮಾಡಿದನು. ಇದನ್ನು ಕೇಳಿದ ಕೂಡಲೇ ಶೀಲವತಿಯ ಕಿವಿಯಲ್ಲಿ ಕಾಯಿಸಿದ ಸೀಸವನ್ನು ಸುರಿದಂತಾ ಯಿತು. ಎದೆಗೆ ಶೂಲಗಳಿಂದ ತಿವಿದಂತಾಯಿತು. ಆಗ ಪ್ರಾಣಾಪಾಯ ಸಮಯವೆಂದು ಧೈರ್ಯವನ್ನು ತಂದುಕೊಂಡು, "ಧರ್ಮಪ್ರಭೂ, ಈ ಗೀತಾ ಪುಸ್ತಕವನ್ನು ಶಿರದಲ್ಲಿ ಧರಿಸಿ ಸತ್ಯವಾಗಿ ವಿಜ್ಞಾಪಿಸಿಕೊಳ್ಳುತ್ತೇನೆ. ನಾನು ಈವರೆಗೆ ನನ್ನನ್ನು ಅಗ್ನಿಸಾಕ್ಷಿಕವಾಗಿ ಧರ್ಮಪತ್ನಿಯೆಂದು ಪಾಣಿಗ್ರಹಣಮಾಡಿದ ತಮ್ಮೊಬ್ಬರಲ್ಲಿ ಅಲ್ಲದೆ ಇತರ ಪುರುಷರಲ್ಲಿ ಸ್ವಪ್ನ ದಲ್ಲಿಯಾದರೂ ಸ್ನೇಹವನ್ನು ಬಯಸಿದ್ದಲ್ಲಿ ಮಹಾರೌರವಾದಿ ನರಕ ಭಾಗಿನಿಯಾಗುವೆನು. ಆದರೆ ತಾವು ಪ್ರತ್ಯಕ್ಷವಾಗಿ ನೋಡಿರುವ ನನ್ನ ಅಪರಾಧವೇನಾದರೂ ಇದ್ದರೆ ಅದನ್ನು ಸ್ಫುಟವಾಗಿ ಅಪ್ಪಣೆ ಕೊಡಿಸ ಬೇಕು, ನಾನು ಸ್ನೇಹಮಾಡಿರುವಂತೆ ತಮ್ಮ ಕಣ್ಣಿಗೆ ಗೋಚರವಾಗಿರುವ ಪುರುಷನನ್ನು ತಾವು ಸುಮ್ಮನೆ ಬಿಟ್ಟಿರಲಾರಿರಿ. ಆದುದರಿಂದ ಆ ಪುರುಷ ನನ್ನು ನನ್ನ ಎದುರಾಗಿ ಕರೆಯಿಸಿ ಅವನ ವಿಚಾರಣೆಯನ್ನು ನಡೆಯಿಸಬೇಕು. ಅನಂತರ ನನ್ನ ಅಪರಾಧವು ಸ್ಥಿರಪಟ್ಟರೆ ತಾವು ತಮ್ಮ ಇಚ್ಛಾನುಸಾರ ಶಿಕ್ಷೆಯನ್ನು ವಿಧಿಸಬಹುದು" ಎಂದಳು. ರಾಜನಿಗೆ ಈಕೆಯ ಮಾತಿನಿಂದ ಆಶ್ಚರ್ಯವಾಯಿತು. ಆ ಕೂಡಲೇ ಕಾರಾಗೃಹದಲ್ಲಿರುವ ಅಪರಾಧಿ ಯನ್ನು ಕರೆತರುವಂತೆ ಮಂತ್ರಿಗಾಜ್ಞೆ ಮಾಡಿದನು. ಈವರೆಗೆ ವಿಜಯ ನಾಗಮನದಿಂದ ಕಿರಿಯ ರಾಣಿಯರಿಬ್ಬರ ಹೊಟ್ಟೆಯಲ್ಲಿಯೂ ಬೆಂಕಿ ಬಿದ್ದಿತ್ತು. ಶೀಲವತಿಯನ್ನು ಮತ್ತೆ ಕರೆಯಿಸಿ ವಿಚಾರಣೆ ಮಾಡಿದ್ದರಿಂದ

ಬೆಂಕಿಯು ಉರಿಯಹತ್ತಿತ್ತು. ಅಪರಾಧಿಯನ್ನು ಕರೆಯಿಸುವ ಆಜ್ಞೆಯಾದೊಡನೆಯೇ ಇಬ್ಬರಿಗೂ ಎದೆಗಳು ಝಲ್ಲೆಂದವು. ಆಗ ಮತ್ತೇನನ್ನು ಮಾಡಲೂ ಸಾಧ್ಯವಿಲ್ಲ. ಏನೇನಾಗುವುದೋ ನೋಡಿ ಅನುಭವಿಸಲೇ ಬೇಕು. ಅದರಿಂದ ಇಬ್ಬರೂ ಜೋಲುಮುಖಗಳನ್ನು ಹಾಕಿಕೊಂಡು ಮಿಡುಕುತ್ತ ಕುಳಿತರು. ಅಪರಾಧಿಯನ್ನು ಕರೆತಂದು ರಾಜಸಮುಖದಲ್ಲಿ ನಿಲ್ಲಿಸಿದರು. ರಾಜನು ಶೀಲವತಿಯನ್ನು ನೋಡಿ ಆ ಅಪರಾಧಿಪುರುಷನನ್ನು ತೋರಿಸಿ, "ನೀನು ಈವರೆಗೆ ಈತನನ್ನು ನೋಡಿರುವೆಯೋ ಇಲ್ಲವೋ?" ಎಂದು ಪ್ರಶ್ನೆಮಾಡಿದನು. ಶೀಲವತಿಗೆ ಈ ಪುರುಷಾಕೃತಿಯನ್ನು ನೋಡಿದೊಡನೆಯೇ ಮುಖವು ಅನೇಕಾವೃತ್ತಿ ನೋಡಿದ್ದಂತೆಯೂ ಪರಿಚಯವು ಇಲ್ಲದಂತೆಯೂ ಭ್ರಾಂತಿಯುಂಟಾಯಿತು. ಸ್ವಲ್ಪ ಆಲೋಚಿಸಿದ ಕೂಡಲೇ ಇವಳು ಪುರುಷವೇಷಧಾರಿಣಿಯಾದ ಸರಸಾಂಗಿಯೆಂಬುದು ಮನಸ್ಸಿಗೆ ದೃಢವಾಯಿತು.

**ಶೀಲವತಿ**—"ಓಹೋ! ನಾನೀವರೆಗೆ ಈ ವ್ಯಕ್ತಿಯನ್ನನೇಕಾವೃತ್ತಿ ನೋಡಿರುವೆನು."

**ರಾಜ**—ಎಲ್ಲಿ ನೋಡಿರುವೆ?

**ಶೀಲವತಿ**—ನಮ್ಮ ಅರಮನೆಯಲ್ಲಿ!

**ರಾಜ**—ಅರಮನೆಯಲ್ಲಿಯೋ ಅಂತಃಪುರದಲ್ಲಿಯೋ?

**ಶೀಲವತಿ**—ಅಂತಃಪುರದಲ್ಲಿಯೂ ನೋಡಿರುವೆನು.

**ರಾಜ**—ನಿಜ. ಅದನ್ನು ನಾನೇ ನೋಡಿರುವೆನು. ನಿಮ್ಮಿಬ್ಬರಿಗೂ ಸ್ನೇಹವುಂಟಷ್ಟೆ?

**ಶೀಲವತಿ**—ಕೇವಲ ಸ್ನೇಹವೆಂದು ಹೇಳಲಾಗುವುದಿಲ್ಲ. ರಾಜ್ಞೀದಾಸೀಭಾವವುಂಟು.

ಎಂದೊಡನೆಯೇ, ಶೀಲವತಿಯು ವ್ಯಕ್ತಿಯ ಗುರುತನ್ನು ಹಿಡಿದಳೆಂದು ಕಾದಂಬಿನಿ ಸೌದಾಮಿನಿಯರಿಗೆ ಎದೆಯೊಡೆಯಿತು. ರಾಜನಿಗೆ ಮಾತ್ರ ನಿಜಾಂಶವು ತಿಳಿಯಲಿಲ್ಲ.

**ರಾಜ**—ಎಲೌ, ಹಾಗಾದರೆ ಈತನು ನಿನ್ನ ಬಳಿಯಲ್ಲಿ ಆಗಾಗ ನಿಸ್ಸಂಕೋಚ ವಾಗಿ ವರ್ತಿಸುತ್ತಿದ್ದುದು ನಿಜವೋ ?

**ಶೀಲವತಿ**—ನಿಜ ! ಸಂಕೋಚದಿಂದ ವರ್ತಿಸಲು ಕಾರಣವೇ ಇಲ್ಲವಲ್ಲಾ !

**ರಾಜ**—ಏತಕ್ಕೆ ನಿನಗೆ ಪ್ರಿಯನಾದುದರಿಂದಲೇ ಅಲ್ಲವೇ ?

**ಶೀಲವತಿ**—ಅಲ್ಲ, ಸ್ತ್ರೀಯು ಸ್ತ್ರೀಗೆ ಪ್ರಿಯನಾಗಲು ಸಾಧ್ಯವೇ ?

**ರಾಜ**—ಎಂದರೆ, ಇವನು ಪುರುಷನೆಂದು ನಿನ್ನ ಕಣ್ಣಿಗೆ ಕಾಣುವುದಿಲ್ಲವೋ ಹೇಗೆ ?

**ಶೀಲವತಿ**—ತಮ್ಮ ಕಣ್ಣಿಗೆ ಪುರುಷನಾಗಿ ಕಾಣುತ್ತಿರಬಹುದು. ನನ್ನ ಕಣ್ಣಿಗೆ ಮಾತ್ರ ನಮ್ಮ ಅರಮನೆಯ ಚೇಟಿಯಾದ ಸರಸಾಂಗಿಯು ಪುರುಷ ವೇಷಧಾರಿಣಿಯಾಗಿ ಕಾಣುತ್ತಿರುವಳು.

ಈ ಉತ್ತರವನ್ನು ಕೇಳಿದೊಡನೆಯೇ ರಾಜನು ವಿಭ್ರಾಂತನಾದನು. ಆ ಕೂಡಲೇ ಆ ಪುರುಷವ್ಯಕ್ತಿಯನ್ನು ದುರದುರನೆ ನೋಡಿ, "ಎಲೈ, ಶೀಲವತಿಯು, ನೀನು ಅಂತಃಪುರದ ಚೇಟಿಯಾದ ಸರಸಾಂಗಿಯೆಂದು ಹೇಳುತ್ತಿರುವಳು, ನಿಜಾಂಶವನ್ನು ತಿಳಿಸು ; ಇಲ್ಲವಾದರೆ ನಿನ್ನ ತಲೆಯು ಹಾರಿಹೋದೀತು " ಎಂದು ಗರ್ಜಿಸಿದನು. ಭೀತಳಾದ ಸರಸಾಂಗಿಯು ಗಡಗಡನೆ ನಡುಗುತ್ತ ಅಳುತ್ತ ರಾಜನ ಪಾದಗಳಮೇಲೆ ಬಿದ್ದು, "ಮಹಾ ಪ್ರಭೂ, ನನ್ನ ಸರ್ವಾಪರಾಧಗಳನ್ನೂ ಮನ್ನಿಸಿ ಕಾಪಾಡಬೇಕು. ನಾನು ಸರಸಾಂಗಿಯೇ ನಿಜ " ಎಂದು ಬೇಡಿಕೊಂಡಳು.

ರಾಜನು ಪರಮಾಶ್ಚರ್ಯಭರಿತನಾಗಿ, "ಹಾಗಾದರೆ ನೀನು ಆ ದಿನ ಅಂತಃಪುರದಲ್ಲಿ ಈ ವೇಷದಿಂದಿರಲು ಕಾರಣವೇನು ? ನಿಜಾಂಶವನ್ನು ಮರೆ ಮಾಜದೆ ವಿವರವಾಗಿ ಹೇಳು" ಎಂದನು. ಸರಸಾಂಗಿಯು ಪ್ರಾಣಭೀತಿ ಯಿಂದ ಸೌದಾಮಿನಿ ಕಾದಂಬಿನಿಯರ ಮುಖವನ್ನು ನೋಡಲು, ಅವರು ಏನು ಹೇಳುವುದಕ್ಕೂ ತೋರದೆ ತಮ್ಮ ಮುಖಗಳನ್ನಾಕಡೆಗೆ ತಿರುಗಿಸಿ ಕೊಂಡರು. ಇವರು ನನ್ನನ್ನು ಕೈಬಿಟ್ಟಿರುವಾಗ ನಾನೇತಕ್ಕೆ ನಿಜಾಂಶ

ವನ್ನು ಹೇಳಿಬಿಡಬಾರದೆಂದು ಪ್ರಾಣದಮೇಲೆ ನಿರಾಶಳಾಗಿ ಸರಸಾಂಗಿಯು ರಾಜನಿಗೆ ಕೈ ಮುಗಿದು, "ಮಹಾಪ್ರಭೂ, ನನಗೆ ತಾವು ಯಾವ ಶಿಕ್ಷೆಯನ್ನು ವಿಧಿಸಿದರೂ ನಾನು ಮಾಡಿದ ಅಪರಾಧಕ್ಕಾಗಿ ಅದನ್ನು ನಾನು ಅನುಭವಿಸುವೆನು. ನಾನು ಈ ಅಪರಾಧಮಾಡಲು ಪ್ರೋತ್ಸಾಹಿಸಿದವರನ್ನು ತಾವು ಶಿಕ್ಷಿಸುವುದಿಲ್ಲವೆಂದು ಅಭಯವನ್ನಿತ್ತರೆ ನಿಸ್ಸಂದೇಹವಾಗಿ ಎಲ್ಲವನ್ನೂ ವಿಜ್ಞಾಪಿಸುವೆನು" ಎಂದಳು. ರಾಜನು, "ಇದು, ಇವಳು ಬುದ್ಧಿಪೂರ್ವಕವಾಗಿ ಮಾಡಿದ ಅಪರಾಧವಲ್ಲವೆಂದು ಊಹಿಸಿ, "ಎಲೌ, ನೀನು ಪರಪ್ರೇರಣೆಯಿಂದೀಕಾರ್ಯ್ಯಮಾಡಿರುವುದಾದರೆ ನಿನಗಿಂತಲೂ ಅವರೇ ಅಧಿಕವಾದ ಶಿಕ್ಷೆಗರ್ಹರು. ಅಪರಾಧಿಗಳಿಗೆ ಶಿಕ್ಷೆಯನ್ನು ವಿಧಿಸದಿರುವುದು ರಾಜಧರ್ಮವಲ್ಲ. ಈಗ ನಿನ್ನ ನಿಬಂಧನೆಗೆ ನಾನು ಒಳಗಾಗತಕ್ಕವನಲ್ಲ. ನಿಜಾಂಶವನ್ನು ಮರೆಮಾಜದೆ ತಿಳಿಸು. ಅನಂತರ ಅಪರಾಧದ ರೀತಿಯನ್ನು ನೋಡಿ ಧರ್ಮವಿರೋಧವಿಲ್ಲದಂತೆ ನಡೆಯುವೆವು" ಎಂದನು. ಆಗ ಸರಸಾಂಗಿಯು, ಬೇರೆ ಉಪಾಯವನ್ನರಿಯದೆ ಕಾದಂಬಿನಿ ಸೌದಾಮಿನಿಯರ ತಂತ್ರವೆಲ್ಲವನ್ನೂ ವಿವರಿಸಿ ಹೇಳಿಬಿಟ್ಟಳು. ಮೋಸಗಾತಿಯರಿಬ್ಬರಿಗೂ ಎದೆಯೊಡೆಯಿತು. ರಾಜನು ಎಲ್ಲವನ್ನೂ ಕೇಳಿದ ಕೂಡಲೇ, ತಾನು, ಅವಿಚಾರನಾಗಿ, ಮಹಾಪತಿವ್ರತೆಯಾದ ಶೀಲವತಿಯಲ್ಲಿ ದೋಷವನ್ನಾರೋಪಿಸಿ ಆ ಸತ್ಯವಂತೆಯನ್ನು ಮೃತ್ಯುವಶಕ್ಕೆ ಒಪ್ಪಿಸಿದ್ದೆನಲ್ಲಾ ! ಎಂದು ಬಹಳವಾಗಿ ಪಶ್ಚಾತ್ತಾಪಪಟ್ಟು ಆಕೆಯ ಬಳಿಗೆ ಬಂದು ಕೈಗಳನ್ನು ಹಿಡಿದು ತನ್ನ ಅಪರಾಧಗಳನ್ನು ಮನ್ನಿಸಬೇಕೆಂದು ಬಹಳವಾಗಿ ಕೇಳಿಕೊಂಡು ಆಕೆಯ ಕಣ್ಣೀರನ್ನು ಒರೆಸಿ ಬಳಿಯಲ್ಲಿ ಕುಳ್ಳಿರಿಸಿಕೊಂಡನು. ವಿಜಯಕುಮಾರನನ್ನು ನೋಡಿ, "ಸುಕುಮಾರಾ, ನಿನ್ನಿಂದ ಸತ್ಯವಂತೆಯಾದ ನಿಮ್ಮ ತಾಯಿಯ ಪ್ರಾಣವು ಉಳಿಯಿತು. ನಮ್ಮ ವಂಶದ ಸತ್ಕೀರ್ತಿಯು ಸಂರಕ್ಷಿತವಾಯಿತು. ನಾನು ನರಕದಿಂದ ಪಾರಾದೆನು. ನೀನೇ ನನ್ನ ವಂಶಾಲಂಕಾರನಾದ ಸತ್ಪುತ್ರನು" ಎಂದು ಆಲಿಂಗಿಸಿ ಮೂರ್ಧವನ್ನಾಘ್ರಾಣಿಸಿದನು.

ಅನಂತರ ಅಪರಾಧಿನಿಯರಾದ ಸೌದಾಮಿನಿ ಕಾದಂಬಿನಿಯರು ರಾಜ್ಞೀಪದವಿಯಲ್ಲಿರಲು ಅನರ್ಹರೆಂದು ಅವರನ್ನು ಪ್ರತ್ಯೇಕವಾದ ಮಂದಿರ ಗಳಲ್ಲಿರಿಸಿ, ಅವರ ಸಾಮಾನ್ಯ ಜೀವನಕ್ಕೇರ್ಪಡಿಸಿ, ರಾಜನು ತಾನು ಮತ್ತೆ ಅವರ ಮುಖಾವಲೋಕನಮಾಡುವುದಿಲ್ಲವೆಂದು ಪ್ರತಿಜ್ಞೆ ಮಾಡಿ ಸರಸಾಂಗಿ ಯನ್ನು ಅವರ ಪರಿಚರ್ಯಕ್ಕೆ ನೇಮಿಸಿದನು.

ಭಾನುತೇಜ ರಾಜಹಂಸರ ವಿಚಾರಣೆಯಿಂದ ರತ್ನಬಾಣವು ವಿಜ ಯನ ಬತ್ತಳಿಕೆಯಲ್ಲಿ ಸೇರಿದ ವಿಚಾರವೂ ತಿಳಿಯಬಂತು; ಅನಂತರ ಅವ ರಿಬ್ಬರಿಗೂ ತಕ್ಕ ಬುದ್ಧಿವಾದವನ್ನು ಹೇಳಿ, ಅವರು ತಮ್ಮ ಅಣ್ಣನಾದ ವಿಜಯಕುಮಾರನ ಮೇಲುಪಙ್ಕ್ತಿಯನ್ನನುಸರಿಸಿ ಅವನ ಆಜ್ಞೆಯಲ್ಲಿರು ವಂತೆ ಏರ್ಪಡಿಸಿದನು.

ಅನಂತರ ವಿಜಯಕುಮಾರನ ಪ್ರಯಾಣಚರಿತ್ರೆಯೆಲ್ಲವನ್ನೂ ಚಂದ್ರ ಸೇನ ಶೀಲವತಿಯರು ವಿವರವಾಗಿ ಕೇಳಿ ಆಶ್ಚರ್ಯಾನಂದಮಗ್ನರಾದರು. ವಿಜಯನು ಕರೆತಂದಿದ್ದ ಚಂದ್ರಲೇಖೆಯು ತಮ್ಮ ಸೋದರ ಸೊಸೆಯೇ ಎಂಬ ವಿಚಾರವು ಆಕೆಯ ಪೂರ್ವಚರಿತ್ರೆಯಿಂದ ವ್ಯಕ್ತವಾದುದರಿಂದ ಅವ ರಿಗೆ ಮತ್ತಷ್ಟು ಸಂತೋಷವುಂಟಾಯಿತು.

ವಿಜಯಕುಮಾರನ ವಿಜಯೋತ್ಸವವನ್ನು ಕೇಳಿ ವಿದ್ಯಾಧರಿಯ ಆನಂದವು ಮೇರೆ ಮೀರಿತು. ಧುರಂಧರನ ಸಂತೋಷಕ್ಕೆ ಪಾರವೇ ಇಲ್ಲವಾಯಿತು.

ಅನಂತರ ಶುಭಲಗ್ನವೊಂದನ್ನೇರ್ಪಡಿಸಿ ಚಂದ್ರಸೇನರಾಜನು ವಿಜಯ ನಿಗೆ ವಿದ್ಯಾಧರಿಯನ್ನು ತಂದು ಚಂದ್ರಲೇಖಾ ವಿಜಯ ವಿದ್ಯಾಧರಿಯರ ವಿವಾಹಮಂಗಳವನ್ನು ಅತಿ ವಿಜೃಂಭಣೆಯಿಂದ ನಡೆಯಿಸಿ ಶೀಲವತೀ ಸಹಿತ ನಾಗಿ ಆನಂದಸಾಗರದಲ್ಲಿ ಓಲಾಡುತ್ತಿದ್ದನು.

## ಅಷ್ಟಮ ತರಂಗಂ

## ಸಂಪೂರ್ಣಂ

ಮೋದಿ ಪವರ್ ಪ್ರಿಟಿಂಗ್ ವರ್ಕ್ಸ್, ಬೆಂಗಳೂರು ಸಿಟಿ

# ಈ ಗ್ರಂಥಕರ್ತರ ಇತರ ಗ್ರಂಥಗಳು



## ನಾಟಕಗಳು

ಶ್ರೀಕೃಷ್ಣಗಾರುಡಿ
ಶ್ರೀಕೃಷ್ಣಪಾರಿಜಾತ
ಶ್ರೀಕೃಷ್ಣಲೀಲಾ ವಿನೋದ
ಶ್ರೀರುಕ್ಮಿಣೀ ಸ್ವಯಂವರ
ಕಂಸವಧ
ಮಾರ್ಕಂಡೇಯ
ಮಹಾತ್ಮ ಕಬೀರದಾಸ
ಭೋಜಕುಮಾರ
ಭೋಜಕಾಳಿದಾಸ
ಸಾಧುತುಕಾರಾಮ

## ಇತರ ಗ್ರಂಥಗಳು

ರಾಜಭಕ್ತಿ ಕಾವ್ಯಂ (ಚಂಪು)
ಪಾಪಿಯಪಾಡು (ಅದ್ಭುತ ಕಾದಂಬರಿ) (ವಿಕ್ಟರ್ ಹ್ಯೂಗೋರವರ ' ದಿ ಲೇ ಮಿಸರಬಲ್ಸ್ ಎಂಬ ಗ್ರಂಥದ ಕನ್ನಡ ಅನುವಾದ)
ಆಕಾಶಗಮನ ಸಾಹಸ (ಆಶ್ಚರ್ಯಕರವಾದ ವಿಷಯಗಳಿಂದ ತುಂಬಿದೆ)
ಶಾಲಾಸಂವಿಧಾನ-ಉಪಾಧ್ಯಾಯರಿಗೆ
ನೀತ್ಯನುಶಾಸನ - ,,

ಬೆಳ್ಳಾವೆ ಪುಸ್ತಕಾಲಯ
ಪ್ರಕಾಶಕರು ಮತ್ತು ಪುಸ್ತಕ ವ್ಯಾಪಾರಿಗಳು
**ಬಳೇಪೇಟೆ, ಬೆಂಗಳೂರು ನಗರ**